श्रीमदानन्दतीर्थभगवत्पादाचार्यविरचितम्

# तलवकारोपनिषद्भाष्यम्

(अष्टव्याख्याविभूषितम्)



सम्पादकः – पं. बि. आर्. वेङ्कटेशाचार्यः

प्रकाशनम् – विश्वमध्वमहापरिषत्

विश्वमध्वमहापरिषत् ग्रन्थमाला - ४१

श्रीमदानन्दतीर्थभगवत्पादाचार्यविरचितम्

# तलवकारोपनिषद्भाष्यम्

(अष्टव्याख्याविभूषितम्)

सम्पादकः

**पं. बि.आर्.वेङ्कटेशाचार्यः**

प्रकाशनम्

**विश्वमध्वमहापरिषत्,**

उत्तरादिमठः श्रीजयतीर्थविद्यापीठम्

बसवनगुडि, वेङ्गळूरु - ४

# TALAVAKAROPANISHAD BHASHYAṂ

**A Work of Sri Madhwacharya**

With eight commentaries written by Sri Vyasateertha, Vamanpanditacharya, Sri Vadiraja Teertha, Sri Vedesha Teertha, Sri Narashimha Bikshu, Sri Satyapriya Teertha, Sri Raghavendra Teertha, Sri Varada Teertha,

**ISBN : 81-903336-6-6**

Copies : 1000

First Edition : November 2007

No.of Pages : XXXII+88



**Price : 40**

Copies can be had from :

1. **Jayateertha Vidyapeetha**
Sri Uttaradi Math
Shankarapurm, 5th Cross
Basavanagudi, Bangalore - 04

2. **Vishva Madhwa Mahaparishat**
#11 2nd Floor Uttaradimath Building.
UttaradiMath Road, Shankarpuram,
Basavanagudi BANGALORE - 4
Phone : 080 26603692

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

Printed by :
Rastrotthana Mudranalaya Bangalore - 19



ಪರಮಪೂಜ್ಯ ಗುರುಗಳ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ
ಸಮರ್ಪಿಸಿದ ಕೃತಿಕುಸುಮ



॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

## ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

## ಅನುಗ್ರಹ ಸಂದೇಶ

''ಆರಣ್ಯಕೇಷ್ವ್ರುತೇ ವಿಷ್ಣುಂ ನೈವಾನ್ಯತ್ ಕಿಂಚಿದುಚ್ಯತೇ'' ಎಂಬ ಉಕ್ತಿಗೆ ಅನುಗುಣವಾಗಿ ಉಪನಿಷತ್ತುಗಳು ಭಗವಂತನ ಪಾರಮ್ಯವನ್ನು ಪ್ರತಿಪಾದನೆ ಮಾಡುವಷ್ಟು ಇನ್ನಾವ ವಿಷಯಗಳನ್ನೂ ಮುಖ್ಯವಾಗಿ ಪ್ರತಿಪಾದನೆ ಮಾಡುವದಿಲ್ಲ. ''ಆರಣಕಮಾವರ್ತಯೇತ್ ಆರಣಕಮಾವರ್ತಯೇತ್'' ಎಂಬಂತೆ ಎಲ್ಲರೂ ಆ ಭಗವಂತನ ಸಾಕ್ಷಾತ್ಕಾರಕ್ಕಾಗಿ ಉಪನಿಷತ್ತಿನ ಅಧ್ಯಯನವನ್ನು ಅವಶ್ಯವಾಗಿ ಮಾಡಬೇಕು. ಅಂತಹ ಉಪನಿಷತುಗಳಲ್ಲಿ ಒಂದಾದದ್ದು ಈ ತಲವಕಾರೋಪನಿಷತ್ತು.

ಎಲ್ಲ ದೇವತೆಗಳಲ್ಲಿರುವ ಎಲ್ಲ ಶಕ್ತಿಗಳು ಭಗವದಧೀನ. ದೇವರ ಅನುಗ್ರಹ ವಿಲ್ಲದೇ ಯಾವ ದೇವತೆಯು ಏನೂ ಮಾಡಲಾರ ? ಈ ತತ್ತ್ವವನ್ನು ಸದೃಷ್ಟಾಂತವಾಗಿ ತೋರಿಸಿದೆ ಈ ಉಪನಿಷತ್ತು, ಭಗವಂತನ ಪ್ರೇರಣೆಯಿಲ್ಲದೇ ಹೋದರೆ ಅಗ್ನಿ-ವಾಯು ಈ ಯಾವ ದೇವತೆಗಳಿಗೆ ಒಂದು ಹುಲ್ಲು ಕಡ್ಡಿಯನ್ನೂ ಅಲುಗಾಡಿಸಲಾಗದು. ದೇವತೆಗಳೇ ದೇವರ ಅನುಗ್ರಹ ಇಲ್ಲದಿದ್ದರೆ ಯಾವ ಕಾರ್ಯಮಾಡಲು ಸಾಧ್ಯವಾಗುವದಿಲ್ಲ ಎಂದಿರುವಾಗ ನಮ್ಮಂತಹವರ ಪಾಡೇನು ? ಆದ್ದರಿಂದ ಎಲ್ಲ ಕಾರ್ಯಗಳಲ್ಲಿ ನಾವು ಭಗವಂತನಿಗೆ ಅಧೀನರಾಗಿದ್ದೇವೆ ಎಂದು ಸದಾಕಾಲ ಚಿಂತಿಸಬೇಕು. ಎನ್ನುವದೇ ಈ ಉಪನಿಷತ್ತಿನ ಸಾರ. ಇದನ್ನು ತಲವಕಾರ ಎನ್ನುವ ಶಬ್ದವೇ ತಿಳಿಸುತ್ತದೆ. **ತ**=ಬಂದವರನ್ನು, **ಲವ**=ಸಣ್ಣವರನ್ನಾಗಿ, **ಕಾರ**=ಮಾಡುವವನು. (''ತಕಾರಶ್ಚಾಗತೇ ಚೋರೇ''ಎನ್ನುವ ಕೋಶವಾಕ್ಯಕ್ಕೆ ಅನುಗುಣವಾಗಿ ತ=ಬಂದವರು ಎಂಬ ಅರ್ಥವನ್ನು ಮಾಡಲಾಗಿದೆ. ತಾನ್ ಆಗತಾನ್ ಅಗ್ನಿವಾಯ್ವಾದೀನ್ ಲವಾನ್ ಅಲ್ಪಾನ್ ಕರೋತಿ ಇತಿ ತಲವಕಾರಃ)ಎಂಬುದಾಗಿಯೂ ಅರ್ಥವನ್ನು ಈ 'ತಲವಕಾರ 'ಎನ್ನುವ ಶಬ್ದಕ್ಕೆ ಚಿಂತನೆ ಮಾಡಬಹುದಾಗಿದೆ.

ಇಂಥಹ ಉಪನಿಷತ್ತಿನ ಯಥಾರ್ಥಜ್ಞಾನವು ಶ್ರೀಮದಾಚಾರ್ಯರ ಭಾಷ್ಯವಿಲ್ಲದೇ ಸರ್ವಥಾ ಸಾಧ್ಯವಿಲ್ಲ. ಶ್ರೀಮದಾನಂದತೀರ್ಥಭಗವತ್ಪಾದರ ಭಾವಬೋಧಕ್ಕೆ ಅನೇಕ ಮಹನಿಯರ ಟಿಪ್ಪಣಿಯ ಅವಶ್ಯಕತೆ ಇದೆ. ನಮ್ಮ ಗುರುಗಳ ವಿಶೇಷ ಅನುಗ್ರಹದಿಂದ ಅವರ ಸಂಗ್ರಹದಿಂದ ಆಯ್ದ ಅನೇಕ ಹಸ್ತಪ್ರತಿಗಳನ್ನು ಪುಸ್ತಕದ ಮಾಧ್ಯಮದಲ್ಲಿ ಪ್ರಕಟನೆ ಗೊಳಿಸುತ್ತಿದ್ದು ಪ್ರಕೃತ ಈ ತಲವಕಾರೋಪನಿಷತ್ತಿಗೆ ಶ್ರೀವ್ಯಾಸತೀರ್ಥರ ವಿವರಣ, ಶ್ರೀವೇದೇಶತೀರ್ಥರ ವಿವರಣ, ವೇದೇಶತೀರ್ಥರ ಶ್ರುತ್ಯರ್ಥ,ಹಾಗು ಅಪೂರ್ವಸಂಗ್ರಹ

ವೆನಿಸಿದ ಶ್ರೀಸತ್ಯಪ್ರಿಯತೀರ್ಥರು ರಚಿಸಿದ ಭಾಷ್ಯವಿವೃತಿ. ಈ ಎಲ್ಲ ಹಸ್ತಪ್ರತಿಗಳನ್ನು ಸತ್ಯಪ್ರಮೋದ ಪುಸ್ತಕಭಂಡಾರದಿಂದ ಸ್ವೀಕರಿಸಲಾಗಿದೆ.' ಜೊತೆಗೆ ಅಪ್ರಕಟಿತವಾದ ನರಸಿಂಹ ಯತಿಗಳು ರಚಿಸಿದ ನೃಸಿಂಹಪ್ರಕಾಶಿಕಾ ವ್ಯಾಖ್ಯಾನವನ್ನು ಡಾ||ವ್ಯಾಸನಕೆರೆ ಪ್ರಭಂಜನಾಚಾರ್ಯರು ನೀಡಿ ಸಹಕರಿಸಿರುತ್ತಾರೆ. ಶ್ರೀವರದತೀರ್ಥರು ರಚಿಸಿದ ವ್ಯಾಖ್ಯಾನವನ್ನು ಶ್ರೀಯುತ ಕೃಷ್ಣಮೂರ್ತಿಗಳು ನೀಡಿ ಸಹಕರಿಸಿರುತ್ತಾರೆ. ನಮ್ಮ ಪ್ರಿಯ ಶಿಷ್ಯನಾದ ಶ್ರೀ ವೆಂಕಟೇಶಾಚಾರ್ಯನು ಈ ಎಲ್ಲ ಹಸ್ತಪ್ರತಿಗಳನ್ನು ಕೂಲಂಕಷವಾಗಿ ಅಧ್ಯಯನಮಾಡಿ ಶುದ್ಧವಾದ ರೀತಿಯಿಂದ ಸಂಶೋಧನೆ ಮಾಡುವಲ್ಲಿ ವಿಶೇಷ ಶ್ರಮವಹಿಸಿರುತ್ತಾನೆ. ಇವರೆಲ್ಲರಿಗೂ ಆ ಭಗವಂತನು ಜ್ಞಾನ-ಭಕ್ತಿ-ವೈರಾಗ್ಯಗಳನ್ನು ಕೊಟ್ಟು ಸಂಶೋಧನಾ ಕಾರ್ಯದಲ್ಲಿ ಇನ್ನೂ ವಿಶೇಷವಾದ ಶಕ್ತಿ-ಉತ್ಸಾಹಗಳನ್ನು ಕೊಡಲಿ, ಎಂದು ನಮ್ಮ ಉಪಾಸ್ಯ ಮೂರ್ತಿಯಾದ ಸೀತಾಪತಿ ಶ್ರೀಮನ್ಮೂಲರಾಮ ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

**ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರು**
ಉತ್ತರಾದಿಮಠ

# ಪ್ರಕಾಶಕರ ಮಾತು

ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥರು ಹುಟ್ಟುಹಾಕಿದ ಸಂಸ್ಥೆ ವಿಶ್ವಮಧ್ವಮಹಾಪರಿಷತ್. ವಿಶ್ವದಲ್ಲೆಲ್ಲ ಮಧ್ವರ ಮತವನ್ನು ಪ್ರಚಾರಮಾಡಬೇಕೆಂಬ ಹೆಗ್ಗುರಿಯಿಂದ ರೂಪುಗೊಂಡ ಸಂಸ್ಥೆ ಇದು. ಕಾಲಕ್ಕೆ ತಕ್ಕಂತೆ ಹೊಸ ಉತ್ಸಾಹದಿಂದ ಈ ಸಂಸ್ಥೆಯ ಚಟುವಟಿಕೆಗಳು ಮೆರಗುಗೊಳ್ಳುತ್ತಲೇ ಇವೆ.

ನಮ್ಮ ಸಂಸ್ಥೆಯು ಪ್ರಾಚೀನವಾದ ಅಪ್ರಕಟಿತವಾದ ಸಮಗ್ರ ಮಾಧ್ವಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈಗಾಗಲೇ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ, ಸಾಮಾನ್ಯಜನರಿಗೆ ಉಪಯುಕ್ತವಾದ ಸಂಸ್ಕೃತ, ಕನ್ನಡ, ತೆಲುಗು, ಹಿಂದಿ, ಮರಾಠಿ, ತಮಿಳು ಹಾಗು ಆಂಗ್ಲಭಾಷೆಗಳಲ್ಲಿ ಅನೇಕಗ್ರಂಥಗಳು ಈ ಸಂಸ್ಥೆಯಿಂದ ಪ್ರಕಾಶಿತವಾಗಿವೆ. ಇನ್ನೂ ಅನೇಕ ಗ್ರಂಥಗಳ ಪ್ರಕಾಶನದ ಕಾರ್ಯ ಭರದಿಂದ ಸಾಗಿದೆ.

ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥರ ಅನುಗ್ರಹದ ಬೆಂಬಲ ಹಾಗೂ ಪರಮಪೂಜ್ಯ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ ಆಶೀರ್ವಾದ ಹಾಗೂ ಮಾರ್ಗದರ್ಶನಗಳು ಈ ಎಲ್ಲ ಕಾರ್ಯಗಳ ಯಶಸ್ಸಿಗೆ ಕಾರಣವಾಗಿವೆ.

ಪ್ರಕೃತ ತಲವಕಾರೋಪನಿಷದ್ಭಾಷ್ಯವು ಎಂಟು ಅಪೂರ್ವವ್ಯಾಖ್ಯಾನಗಳಿಂದ ಪ್ರಕಾಶಿತವಾಗುತ್ತಿರುವದು ಪರಿಷತ್ತಿಗೆ ಹೆಮ್ಮೆಯ ವಿಷಯ.

ಇದನ್ನು ಸಂಪಾದನೆ ಮಾಡಿದ ಪಂ. ಬಿ.ಆರ್.ವೆಂಕಟೇಶಾಚಾರ್ಯ ಇವರಿಗೆ, ಗ್ರಂಥಪ್ರಕಾಶನಕ್ಕಾಗಿ ಮುದ್ರಣಕ್ಕಾಗಿ ಸಂಪೂರ್ಣವಾಗಿ ಧನಸಹಾಯ ಮಾಡಿದ ಬೆಂಗಳೂರಿನ ವೆಂಕಟರಾವ್ ಕುಟುಂಬ ಹಾಗೂ ಗಿರೀಶ ನಾಯಕ್ ದಂಪತಿಗಳಿಗೆ

ಹಾಗೂ ಸುಂದರವಾಗಿ ಮುದ್ರಣಮಾಡಿದ ರಾಷ್ಟ್ರೋತ್ಥಾನ ಮುದ್ರಣಾಲಯದವರಿಗೆ, ಅಲ್ಲದೆ ಈ ಗ್ರಂಥದ ಪ್ರಕಾಶನಕ್ಕಾಗಿ ಸಹಾಯಮಾಡಿದ ಎಲ್ಲರಿಗೂ ಪರಿಷತ್ತು ಆಭಾರಿಯಾಗಿದೆ.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು - **4**

# ಮೊದಲ ಮಾತು

ಭಗವತ್ತತ್ತ್ವವನ್ನು ತಿಳಿಯಲು ಬ್ರಹ್ಮ-ರುದ್ರರು ನಡೆಸಿದ ಸಂವಾದವೇ ಈ ತಲವಕಾರೋಪನಿಷತ್ತು. ಪರಬ್ರಹ್ಮನಾದ ವಿಷ್ಣುವೇ ಸಕಲಮಾನವರಿಗೂ, ದೇವತೆಗಳಿಗೂ ಪ್ರವರ್ತಕನೆಂಬುದನ್ನು ಈ ಉಪನಿಷತ್ತು ಒಂದು ಆಖ್ಯಾಯಿಕೆಯ ಮೂಲಕ ತಿಳಿಸಲು ಹೊರಟಿರುತ್ತದೆ. ಒಮ್ಮೆ ದೇವಾಸುರರ ಸಂಗ್ರಾಮ ನಡೆಯಿತು. ಶ್ರೀಹರಿಯು ದೇವತೆಗಳಲ್ಲಿ ನೆಲೆಸಿ ಅವರಿಗೆ ಜಯವನ್ನು ತಂದುಕೊಟ್ಟನು. ಆದರೆ ದೇವತೆಗಳು ಇದನ್ನು ತಿಳಿಯದೇ ತಮ್ಮ ಬಾಹುಬಲದಿಂದಲೇ ತಮಗೆ ಜಯವು ದೊರಕಿತು ಎಂದು ಭಾವಿಸಿದರು. ಅವರನ್ನು ಎಚ್ಚರಿಸಲು ಭಗವಂತನು ಯಕ್ಷರೂಪವನ್ನು ಸ್ವೀಕರಿಸಿ ಪಾರ್ವತಿ, ರುದ್ರ, ಬ್ರಹ್ಮರಿಂದೊಡಗೂಡಿ ದೇವತೆಗಳ ಮುಂದೆ ಬಂದು ನಿಂತನು. ಅಗ್ನಿ ಮತ್ತು ಅಷ್ಟದಿಕ್ಪಾಲಕರಲ್ಲಿ ಒಬ್ಬನಾದ ವಾಯುವು ಈ ಯಕ್ಷರೂಪಧಾರಣೆ ಮಾಡಿ ಬಂದ ಭಗವಂತನನ್ನು ತಿಳಿಯಲು ಪ್ರಯತ್ನಿಸಿದರೂ ತಿಳಿಯಲು ಸಾಧ್ಯವಾಗಲಿಲ್ಲ, ಅವಮಾನಿತರಾಗಿ ದೂರಸರಿದರು. ಇಂದ್ರನು ಈ ಯಕ್ಷನನ್ನು ವಿಚಾರಿಸಲು ಮುಂದೆ ಬಂದಾಗ ನೀನು ಇಂದ್ರನಿಗೆ ಉಪದೇಶಮಾಡು ಎಂದು ಉಮಾದೇವಿಗೆ ಆದೇಶಿಸಿ ಭಗವಂತನು ಅದೃಶ್ಯನಾದನು. ಉಮಾದೇವಿಯು ಪ್ರತ್ಯಕ್ಷಳಾಗಿ ಇಂದ್ರನಿಗೆ ಉಪದೇಶಿಸಿದಳು. ಎನ್ನುವದು ಈ ಉಪನಿಷತ್ತಿನಲ್ಲಿ ಮೂಡಿಬಂದ ಕಥೆ. ''ಎಲ್ಲ ಕಾರ್ಯಗಳಲ್ಲಿ ನಾವು ಭಗವದಧೀನರಾಗಿ ಕೆಲಸವನ್ನು ಮಾಡುತ್ತೇವೆ ಎನ್ನುವ ಅಸ್ವಾತಂತ್ರ್ಯಚಿಂತನೆಯನ್ನು ಪ್ರತಿನಿತ್ಯಮಾಡಬೇಕು.'' ಎನ್ನುವದೇ ಈ ಕಥೆಯಿಂದ ತಿಳಿದು ಬರುವ ಸಂದೇಶ. ಇಂಥಹ ಸುಂದರವಾದ ಉಪನಿಷತ್ತನ್ನು ನಮ್ಮ ಶಿಷ್ಯನಾದ ಚಿ. ವೆಂಕಟೇಶಾಚಾರ್ಯನು ಏಳು ವ್ಯಾಖ್ಯಾನಗಳೊಂದಿಗೆ ಸಂಶೋಧಿಸಿ ಸಂಪಾದಿಸುವ ಮೂಲಕ ಶ್ರೀವೇದವ್ಯಾಸರ ಹಾಗು ಶ್ರೀಮದಾಚಾರ್ಯರ ಸೇವೆಯನ್ನು ಮಾಡಿರುತ್ತಾನೆ ಅವನಿಗೆ ದೇವರು ಜ್ಞಾನಭಕ್ತಿವೈರಾಗ್ಯಗಳನ್ನು ಕೊಡಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ

ಪಂ. ರಂಗಾಚಾರ್ಯ ಗುತ್ತಲ್
ಕುಲಪತಿಗಳು ಜಯತೀರ್ಥವಿದ್ಯಾಪೀಠ.

# ಪ್ರಸ್ತಾವನೆ

ಅನಾದಿಕಾಲದಿಂದಲೂ ಬಾನೆತ್ತರಕ್ಕೆ ಬೆಳೆದು ನಿಂತದ್ದು ನಮ್ಮ ವೈದಿಕ ಸಂಸ್ಕೃತಿ. ಇದು ಧರ್ಮಾದಿ ಚತುರ್ವಿಧ ಪುರುಷಾರ್ಥಗಳಿಗೆ ಕಾರಣವಾದ ಸಂಸ್ಕೃತಿ. ಅಷ್ಟೇ ಅಲ್ಲದೇ ತನ್ನದೇ ಆದ ಭವ್ಯಪರಂಪರೆಯಿಂದ ಸರ್ವಜನರ ಮನಸ್ಸನ್ನು ಗೆಲ್ಲುತ್ತಾ ಬಂದ ದಿವ್ಯ ಸಂಸ್ಕೃತಿ ಇದು. ಇಂಥ ಸಂಸ್ಕೃತಿಗೆ ಕಾರಣವಾದದ್ದೇ ಅನಂತವೇದಗಳು. ಈ ವೇದಗಳಿಗೆ ಬೀಜರೂಪವಾಗಿ ಇದ್ದದ್ದು ಓಂಕಾರ. ಅದರ ಅಂಕುರರೂಪವೇ ಭೂಃ ಭುವಃ ಸ್ವಃ ಎನ್ನುವ ವ್ಯಾಹೃತಿಗಳು. ವ್ಯಾಹೃತಿಯ ಮೂರು ಪಾದಗಳ ವಿಸ್ತಾರವೇ ಗಾಯತ್ರಿಯ ಮೂರು ಪಾದಗಳು. ಅವುಗಳ ಕಾಂಡರೂಪವೇ ಮೂರು ವರ್ಗದ ಪುರುಷಸೂಕ್ತ. ಪುರುಷಸೂಕ್ತದ ಮೂರು ವರ್ಗಗಳ ವಿಸ್ತಾರವೇ ನಿಗಮವೆಂಬ ಕಲ್ಪತರು. ಇಷ್ಟು ವ್ಯಾಪಕವಾಗಿ ಬೆಳೆದು ಬಂದದ್ದು ನಮ್ಮ ವೇದಪರಂಪರೆ. ಈ ವೇದಗಳೇ ಸಂಹಿತೆ, ಬ್ರಾಹ್ಮಣ, ಮತ್ತು ಉಪನಿಷತ್ತು (ಆರಣ್ಯಕ) ಎನ್ನುವ ಹೆಸರಿನಲ್ಲಿ ವ್ಯಾಪಕವಾಗಿ ಬೆಳೆದು ನಿಂತಿವೆ. ಈ ಎಲ್ಲ ನಿಗಮತತಿಗಳಿಂದ ಪ್ರತಿಪಾದ್ಯ ಭಗವಂತ. ಅದರಲ್ಲಿಯೂ ಉಪನಿಷತ್ತುಗಳಿಂದ ಆಗುವ ಭಗವಂತನ ಅರಿವು ಅತ್ಯಂತ ಸರಳ ಹಾಗು ಸ್ವರಸ. ಉಪನಿಷತ್ತು ಎನ್ನುವ ಶಬ್ದವೇ ಹೇಳುವಂತೆ ಯಾವುದು ತನ್ನಲ್ಲಿ ಬ್ರಹ್ಮತತ್ತ್ವವನ್ನು ಅಡಗಿಸಿಕೊಂಡಿದೆಯೋ ಅದು ಉಪನಿಷತ್ತು.

ಈ ಉಪನಿಷತ್ತುಗಳು ಒಂದೊಂದು ವೇದಕ್ಕೆ ಸಂಬಂಧಪಟ್ಟಂತೆ ಅನೇಕ ವಿಭಾಗಗಳನ್ನೊಳಗೊಂಡಿವೆ. ಅವುಗಳಲ್ಲಿ ಪ್ರಧಾನವಾದವುಗಳು ಹತ್ತು ಮಾತ್ರ. ಈ ಹತ್ತು ಉಪನಿಷತ್ತುಗಳೂ ನಾಲ್ಕು ವೇದಗಳಿಗೆ ಸಂಬಂಧಪಟ್ಟಿವೆ. ಋಗ್ವೇದಕ್ಕೆ ಸಂಬಂಧಿಸಿದ ಉಪನಿಷತ್ತು ಐತರೇಯ. ಯಜುರ್ವೇದದಲ್ಲಿ ಕೃಷ್ಣ ಶುಕ್ಲ ಎಂದು ಎರಡು ಶಾಖೆಗಳು. ಕೃಷ್ಣಯಜುರ್ವೇದಕ್ಕೆ ಸಂಬಂಧಿಸಿ ಉಪನಿಷತ್ತು ಎರಡು. 1.ಕಾಠಕ 2.ತೈತ್ತಿರೀಯ. ಶುಕ್ಲ-ಯಜುರ್ವೇದದ ಉಪನಿಷತ್ತುಗಳು ಎರಡು. 1.ಈಶಾವಾಸ್ಯ 2.ಬೃಹದಾರಣ್ಯ. ಸಾಮವೇದದ ಉಪನಿಷತ್ತುಗಳು ಎರಡು. 1.ತಲವಕಾರೋಪನಿಷತ್ತು 2.ಛಾಂದೋಗ್ಯೋಪನಿಷತ್ತು. ಆಥರ್ವಣ, ಮಾಂಡೂಕ, ಷಟ್ಪ್ರಶ್ನೆಗಳೆಂಬ ಮೂರು ಉಪನಿಷತ್ತುಗಳು ಆಥರ್ವಣವೇದಕ್ಕೆ ಸಂಬಂಧಿಸಿವೆ. ಹೀಗೆ ಒಟ್ಟಾರೆ ನಾಲ್ಕು ವೇದಗಳಿಗೆ ಸಂಬಂಧಿಸಿದಂತೆ ಪ್ರಸಿದ್ಧವಾದ ಉಪನಿಷತ್ತುಗಳು ಹತ್ತು.

ಈಗ ನಾವು ಕಾಣಲು ಹೊರಟದ್ದು ತಲವಕಾರೋಪನಿಷತ್ತು. ಇದಕ್ಕೆ ಕೇನೋಪನಿಷತ್ತು ಎನ್ನುವ ಮತ್ತೊಂದು ಹೆಸರಿದೆ. ಕೇನ ಎಂಬ ಶಬ್ದದಿಂದ ಆರಂಭಗೊಳ್ಳುವ ಉಪನಿಷತ್ತು ಆದ್ದರಿಂದ ಇದು ಕೇನೋಪನಿಷತ್ತು.

**ಮಂತ್ರ-ಋಷಿ-ದೇವತೆಗಳು**

ಮಂತ್ರಗಳನ್ನು ಪಠಿಸುವಾಗ ಮೊದಲು ಋಷಿ-ಛಂದಸ್ಸು-ದೇವತೆಗಳನ್ನು ಸ್ಮರಿಸುವದು ಆವಶ್ಯಕ. ತಂದೆ ಮಕ್ಕಳಿಬ್ಬರ ಸಂವಾದ ರೂಪವಾದ ಈ ಉಪನಿಷತ್ತು ಜಗದ್ವಂದ್ಯರಾದ

ಬ್ರಹ್ಮರುದ್ರರನ್ನೇ ಋಷಿಗಳನ್ನಾಗಿ ಪಡೆದುಕೊಂಡಿರುತ್ತದೆ. ಅವರು ಉಪಾಸನೆಮಾಡಲು ಹೊರಟದ್ದು ಜಗತ್ಪಿತನಾದ ಪರಮಾತ್ಮನನ್ನು. ಆದ್ದರಿಂದ ಪರಮಾತ್ಮನೇ ಈ ಉಪನಿಷತ್ತಿನ ಪ್ರತಿಪಾದ್ಯದೇವತೆ. ಅವನ ಸರ್ವೋತ್ತಮತ್ವವೇ ಈ ಗ್ರಂಥಕ್ಕೆ ವಿಷಯ. ಇದೊಂದು ತ್ರಿಮೂರ್ತಿಗಳ ಉಪನಿಷತ್ತು ಎಂದರೆ ತಪ್ಪಾಗದು.

ಈ ಪುಟ್ಟ ಉಪನಿಷತ್ತಿನ ಮಂತ್ರಗಳಿಗೆ ಇತಿಹಾಸ-ಪುರಾಣಗಳ ಪ್ರಮಾಣ ವಚನಗಳನ್ನು ನೀಡಿ, ಉಪನಿಷತ್ತಿನ ಭಾವವನ್ನು ಸ್ಪಷ್ಟಪಡಿಸುವ ಪ್ರಾಮಾಣಿಕ ಹೊಣೆ ಹೊತ್ತವರು ಶ್ರೀಮದಾನಂದತೀರ್ಥಭಗವತ್ಪಾದರು. ಆಚಾರ್ಯರ ಭಾಷ್ಯವನ್ನು ಪರಿತ್ಯಜಿಸಿ ಮಂತ್ರಗಳ ಅರ್ಥವನ್ನು ತಿಳಿಯುತ್ತ ಹೋದರೆ ಉಪನಿಷತ್ತುಗಳ ಅರ್ಥವು ಮನದಟ್ಟಾಗುವದಿಲ್ಲ. ಹೀಗಾಗಿ ಭಾಷ್ಯದ ಅಧ್ಯಯನ ಹಾಗು ಶ್ರವಣ ಅನಿವಾರ್ಯ. ಆಚಾರ್ಯರು ನೀಡಿದ ಭಾಷ್ಯದ ಅಧ್ಯಯನವನ್ನು ಪ್ರಾಚೀನ ವ್ಯಾಖ್ಯಾನಗಳು ಪೂರ್ಣಗೊಳಿಸುತ್ತವೆ. ಈ ನಿಟ್ಟಿನಲ್ಲಿ ಎಂಟು ವ್ಯಾಖ್ಯಾನಗಳನ್ನೊಳಗೊಂಡ ತಲವಕಾರೋಪನಿಷತ್‌ಭಾಷ್ಯವು ನಿಮ್ಮ ಕೈ ಸೇರಲಿರುವ ಗ್ರಂಥವಾಗಿದೆ. ಇದು ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಾಶಿತವಾಗಿದ್ದು ಇದರ ಸದುಪಯೋಗವನ್ನು ಎಲ್ಲರೂ ಪಡೆದುಕೊಳ್ಳಬೇಕಾಗಿ ಸವಿನಯ ಪ್ರಾರ್ಥನೆ.

# ವ್ಯಾಖ್ಯಾನಕಾರರ ಪರಿಚಯ

**ವ್ಯಾಸತೀರ್ಥರು**

ಉಪನಿಷನ್ಮಂತ್ರಗಳಿಗೆ ಸರಳವಾಗಿ ವಿವರಣೆ ನೀಡುವ ಇವರ ಶೈಲಿ ಅನುಸರಣೀಯ. ಹಾಗು ಅವಿಸ್ಮರಣೀಯ. 'ಶ್ರೀಮಟ್ಟೀಕಾಕೃತ್ಪಾದರು ಈಶಾವಾಸ್ಯ-ಷಟ್ಪ್ರಶ್ನಗಳಿಗೆ ಮಾತ್ರ ಟೀಕೆಗಳನ್ನು ರಚಿಸಿದರು' ಎನ್ನುವ ಇತಿಹಾಸವು ಛಲಾರಿ ಆಚಾರ್ಯರ ಜಯತೀರ್ಥವಿಜಯ ವ್ಯಾಖ್ಯಾನದಲ್ಲಿ ಬಹಳ ಹೃದಯಂಗಮವಾಗಿ ಮೂಡಿಬಂದಿದೆ. ಒಮ್ಮೆ ವ್ಯಾಸತೀರ್ಥರು ಈಶಾವಾಸ್ಯ-ಷಟ್ಪ್ರಶ್ನ ಇವುಗಳನ್ನು ಹೊರತುಪಡಿಸಿ ಇತರ ಎಂಟು ಉಪನಿಷತ್ತುಗಳಿಗೆ ಟೀಕೆಯನ್ನು ರಚಿಸಿ ತಮ್ಮ ಗುರುಗಳಾದ ಶ್ರೀಮಟ್ಟೀಕಾಕೃತ್ಪಾದರಿಗೆ ಸಮರ್ಪಿಸಿದರು. 'ವಿಶ್ವಗುರುಗಳಾದ ಶ್ರೀಮದಾನಂದತೀರ್ಥರ ಗ್ರಂಥಗಳಲ್ಲಿ ಹುದುಗಿದ ಭಾವಗಳನ್ನು ಸ್ಪಷ್ಟವಾಗಿ ತಿಳಿಪಡಿಸುವಲ್ಲಿ ನಿಮಗೆ ಸಮಾನರು ಯಾರಿದ್ದಾರೆ ? ಕಾರಣ ನನ್ನ ಈ ಟೀಕಾಗ್ರಂಥಗಳು ಬೆಳಕಿಗೆ ಬರುವ ಹಾಗೆ ಅನುಗ್ರಹಿಸಬೇಕೆಂದು ಯಾಚಿಸಿದರು'. ಅಮೋಘವಾದ ದೈವಸಂಕಲ್ಪವನ್ನರಿತು ಶಿಷ್ಯನ ಮೇಲೆ ಅಪಾರ ಕರುಣೆಯನ್ನು ಹರಿಸಿ ಉಳಿದ ಉಪನಿಷದ್ಭಾಷ್ಯಗಳಿಗೆ ಟೀಕೆಯನ್ನು ರಚಿಸಲಿಲ್ಲ. ಇವರು ರಚಿಸಿದ ಕೃತಿಗಳ ವಿವರ ಹೀಗಿದೆ. ಈಶ-ಕೇನ-ಕಠ-ಅಥರ್ವಣ-ಮಾಂಡೂಕ ತೈತ್ತಿರೀಯ ಐತರೇಯ ಛಾಂದೋಗ್ಯ-ಬೃಹದಾರಣ್ಯ ಈಮೊದಲಾದ ಉಪನಿಷದ್ಭಾಷ್ಯಗಳಿಗೆ ಟೀಕೆಗಳನ್ನು ರಚಿಸಿರುತ್ತಾರೆ. ಇದಲ್ಲದೇ ತಾತ್ಪರ್ಯನಿರ್ಣಯವ್ಯಾಖ್ಯಾನ. ತಂತ್ರಸಾರಸಂಗ್ರಹವ್ಯಾಖ್ಯಾನ. ಜಯತೀರ್ಥವಿಜಯ. ಅಣುಜಯತೀರ್ಥವಿಜಯ. ಹೀಗೆ ಅನೇಕ ಗ್ರಂಥಗಳನ್ನು ರಚನೆಮಾಡಿ ಪ್ರಾಚೀನವ್ಯಾಖ್ಯಾನ-ಕಾರರು ಎನ್ನುವ ಹೆಗ್ಗಳಿಕೆಗೆ ಪಾತ್ರರಾಗಿರುತ್ತಾರೆ.

**ವಾಮನಪಂಡಿತರು**

ಇವರು ತಮ್ಮ ವ್ಯವಹಾರನಾಮವನ್ನು ಎಲ್ಲಿಯೂ ತಿಳಿಪಡಿಸದಿದ್ದರೂ ತಮ್ಮನ್ನು ತಾವು 'ತ್ರೈವಿಕ್ರಮದಾಸ'ರೆಂದು ಪರಿಚಯಿಸಿ ಕೊಂಡಿರುವದು ತ್ರಿವಿಕ್ರಮಪಂಡಿತಾಚಾರ್ಯರಲ್ಲಿ ಇವರಿಗೆ ಇರುವ ಅಪಾರ ಭಕ್ತಿ-ಶ್ರದ್ಧಾಗಳನ್ನು ತಿಳಿಸುತ್ತದೆ. ಇವರು ನಾರಾಯಣಪಂಡಿತರ ಶಿಷ್ಯರಾಗಿರುವದರ ಜೊತೆಗೆ ಅವರ ಮಕ್ಕಳೂ ಆಗಿದ್ದರು ಎನ್ನುವದು ಪ್ರಾಚೀನ ಹಸಪ್ರತಿಗಳಿಂದ ತಿಳಿದು ಬಂದ ವಿಷಯವಾಗಿದೆ. ವಾಮನಪಂಡಿತರು ಅಣುಭಾಷ್ಯಕ್ಕೆ ಆನಂದಮಾಲಾ ಎಂಬ ಹೆಸರಿನಲ್ಲಿ ಟಿಪ್ಪಣಿಯೊಂದನ್ನು ರಚಿಸಿದ್ದಾರೆ. ಇದಲ್ಲದೇ ಈಶ-ಕೇನ-ಕಠ-ಪ್ರಶ್ನ-ಅಥರ್ವಣ-ಮಾಂಡೂಕ ಉಪನಿಷದ್ಭಾಷ್ಯಗಳಿಗೆ ಟೀಕೆಗಳನ್ನು ರಚಿಸಿದ್ದಾರೆ. ಪ್ರಕೃತ ಕೇನೋಪನಿಷದ್ಭಾಷ್ಯವ್ಯಾಖ್ಯಾನವು ಇದರಲ್ಲಿ ಸೇರಿದೆ. ಪ್ರಮೇಯಗಳನ್ನು ಸರಸವಾಗಿ ಪ್ರತಿಪಾದಿಸುವ ಇವರ ಶೈಲಿಯನ್ನು ಗಮನಿಸಿದರೆ ನಾರಾಯಣಪಂಡಿತರ ಹಾಗು ತ್ರಿವಿಕ್ರಮಪಂಡಿತರ ಗ್ರಂಥಶೈಲಿಯ ಅನುಕರಣೆ ಇವರ ಗ್ರಂಥಗಳಲ್ಲಿ ಎದ್ದು ತೋರುತ್ತದೆ.

**ವಾದಿರಾಜರು**

ರಸಮಯವಾದ ಹಾಸ್ಯೋಕ್ತಿಗಳಿಂದ ಸಿದ್ಧಾಂತವನ್ನು ತಿಳಿಪಡಿಸುವ ಇವರ ಪಾಂಡಿತ್ಯ ಅಸದೃಶವಾದದ್ದು. ಕಾವ್ಯಮಯ ಲಲಿತಪದಪುಂಜಗಳಲ್ಲಿ ತತ್ತ್ವಗಳನ್ನು ಹೆಣೆದು ವ್ಯಾಸದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಧೀಮಂತರಿವರು. ಶ್ರೀಮನ್ಮಧ್ವಾಚಾರ್ಯರಲ್ಲಿ ಹಾಗೂ ಶ್ರೀಮಜ್ಜಯತೀರ್ಥರಲ್ಲಿ ಇವರು ತೋರಿದ ಭಕ್ತಿಶ್ರದ್ಧಾಗಳು ಅನ್ಯಾದೃಶ. ಅನುಕರಣೀಯ. ಇವರು 64 ಕಲೆಗಳಲ್ಲಿ ನಿಪುಣರು. ಇವರು ತೋರಿದ ಪವಾಡ ಬೆಟ್ಟದಷ್ಟಿದೆ. ಇವರು ರಚಿಸಿದ ಕೃತಿಗಳು ನೂರೈದು. ಇವರು ರಚನೆ ಮಾಡಿದ ಅನೇಕ ಗ್ರಂಥಗಳು ಸೋದೆ ಮಠದಿಂದ ಹಾಗು ಇತರ ವಿದ್ಯಾಸಂಸ್ಥೆಗಳಿಂದ ಮುದ್ರಣ ಗೊಂಡಿರುತ್ತವೆ. ಇವರು ರಚನೆಮಾಡಿದ ಪ್ರಧಾನಗ್ರಂಥಗಳು ಈ ಕೆಳಗಿನಂತಿವೆ. 1.ಈಶ-ಕೇನ ಕಠ-ಷಟ್ಪ್ರಶ್ನ-ಮಾಂಡೂಕ-ತೈತ್ತಿರೀಯ-ಅಥರ್ವಣ ಮೊದಲಾದ ಉಪನಿಷತ್ತುಗಳಿಗೆ ಟಿಪ್ಪಣಿಯನ್ನು ಬರೆದಿರುತ್ತಾರೆ ಜೊತೆಗೆ 2.ನ್ಯಾಯಸುಧಾಗುರ್ವರ್ಥದೀಪಿಕಾ. 3.ತತ್ತ್ವಪ್ರಕಾಶಿಕಾಗುರ್ವರ್ಥದೀಪಿಕಾ. 4.ಗೀತಾಭಾಷ್ಯ ಟಿಪ್ಪಣಿ. 5.ಮಹಾಭಾರತಲಕ್ಷಾಲಂಕಾರ. 6.ಮಹಾಭಾರತತಾತ್ಪರ್ಯನಿರ್ಣಯಭಾವಪ್ರಕಾಶಿಕಾ. 7.ತಂತ್ರಸಾರಸಂಗ್ರಹಟೀಕಾ. 8.ಸನತ್ಸುಜಾತೀಯವ್ಯಾಖ್ಯಾನ. 9.ಯುಕ್ತಿಮಲ್ಲಿಕಾ. 10.ನ್ಯಾಯ-ರತ್ನಾವಲೀ. 11.ಉಪನ್ಯಾಸರತ್ನಮಾಲಾ. 12.ಹರಿಭಕ್ತಿಲತಾ. 13.ಶ್ರುತಿತತ್ವಪ್ರಕಾಶಿಕಾ. 14.ಭೂಗೋಲನಿರ್ಣಯ 15.ಏಕಾದಶೀನಿರ್ಣಯ. 16.ಪಾಷಂಡಮತಖಂಡನ. 17.ಕಲ್ಪಲತಾ. 18.ವಿವರಣವ್ರಣ. 19.ರುಕ್ಮಿಣೀಶವಿಜಯ. 20.ತೀರ್ಥಪ್ರಬಂಧ. 21.ಸರಸಭಾರತೀವಿಲಾಸ.

**ವೇದೇಶತೀರ್ಥರು**

''ವೇದೇಶಭಿಕ್ಷುಣಾ ಬಾಲಬೋಧಾಯಾಪ್ತತಯೇರಿತಃ'' ಎಂಬುದಾಗಿ ತಮ್ಮನ್ನು ಏಕವಚನ ಪ್ರಯೋಗದಿಂದ ಪರಿಚಯಿಸಿಕೊಂಡಿರುವ ಇವರು ನಿಜವಾಗಿಯೂ ವಿನಯಮೂರ್ತಿಗಳೇ

ಆಗಿದ್ದಾರೆ. ಪರಮವಿರಕ್ತಶಿಖಾಮಣಿಗಳು, ಯಾದವಾರ್ಯರಿಗೆ ವಿದ್ಯಾಗುರುಗಳು, ಶ್ರೀನಿವಾಸತೀರ್ಥರಿಗೆ ಪರಮಗುರುಗಳು ಆಗಿರುತ್ತಾರೆ. ಇವರಿಗಿರುವ ಒಂದು ಲೋಕೋತ್ತರಖ್ಯಾತಿ "ಅನುಜೋದಯಮಾಶಾಸೇ ನಾಶಾಸೇ ವಿದುಷಾಂ ಜಯಂ" ಎಂಬಂತೆ ತಮ್ಮ ಪೂರ್ವಾಶ್ರಮದ ಅನುಜರೆನಿಸಿದ ಯಾದವಾರ್ಯರಿಗೆ ಹಗಲಿರಳು ಪಾಠವನ್ನು ಹೇಳಿ ಅವರನ್ನು ಮತಿವಂತರನ್ನಾಗಿಸಿದ ಧೀಮಂತರಿವರು. ಇವರು ಕೇನ-ಕಠ-ಐತರೇಯ-ಛಾಂದೋಗ್ಯ ಭಾಷ್ಯಗಳಿಗೆ ಟೀಕೆಯನ್ನು ರಚಿಸಿರುತ್ತಾರೆ. ಇವರ ಗ್ರಂಥಾನುವಾದದ ಶೈಲಿ ಸರಳ ಹಾಗೂ ಸುಬೋಧ.

**ನರಸಿಂಹಯತಿಗಳು**

ಇವರು ಶ್ರೀಮದುತ್ತರಾದಿಮಠಾಧೀಶರಾದ ಶ್ರೀ 1008 ಶ್ರೀ ವಿದ್ಯಾಧೀಶತೀರ್ಥರ ಶಿಷ್ಯರು. ಶ್ರೀವಿದ್ಯಾಧೀಶತೀರ್ಥರ ಆಜ್ಞೆಪಡೆದು ಗುರುಗಳ ಲೋಹಮಯವಾದ ಪ್ರತಿಮೆಯನ್ನು ಮಾಡಿಸಿ ನಿರಂತರ ಆರಾಧನೆ ಮಾಡಿದರು. ಪ್ರಕೃತ ಇವರು ರಚಿಸಿದ ತಲವಕಾರೋಪನಿಷದ್ವ್ಯಾಖ್ಯಾನವು ಹೃದಯಂಗಮವಾಗಿರುತ್ತದೆ. ಇವರ ಖಂಡಾರ್ಥವು ವ್ಯಾಸತೀರ್ಥರ ಶೈಲಿಯನ್ನು ಅನುಸರಿಸಿದೆ.

**ರಾಘವೇಂದ್ರರು**

ಇವರು ಸಾಹಿತ್ಯ-ವ್ಯಾಕರಣ-ತರ್ಕ-ಮೀಮಾಂಸಾ-ಯೋಗ-ಧರ್ಮಶಾಸ್ತ್ರ-ವೇದಾಂತ ಮೊದಲಾದ ಎಲ್ಲ ಶಾಸ್ತ್ರಗಳಲ್ಲಿಯೂ ತಲಸ್ಪರ್ಶಿಪಾಂಡಿತ್ಯವನ್ನು ಪಡೆದಿದ್ದರು ಎನ್ನುವದು ಇವರ ಪ್ರತಿಯೊಂದೂ ಕೃತಿಗಳಲ್ಲಿ ಎದ್ದು ತೋರುತ್ತದೆ. ತಮ್ಮ ಅದ್ಭುತ ಪವಾಡಗಳಿಂದ ಮಧ್ವಸಿದ್ಧಾಂತವನ್ನು ವಿಶ್ವವಿದಿತವಾಗುವಂತೆ ಮಾಡಿದವರು ರಾಘವೇಂದ್ರಸ್ವಾಮಿಗಳವರು. ಇವರು ರಚಿಸಿದ ಪ್ರಧಾನ ಗ್ರಂಥಗಳು.

1.ನ್ಯಾಯಸುಧಾಪರಿಮಳ 2.ತತ್ತ್ವಪ್ರಕಾಶಿಕಾಭಾವದೀಪ 3.ಗೀತಾಭಾಷ್ಯಪ್ರಮೇಯ-ದೀಪಿಕಾಭಾವದೀಪ 4.ಗೀತಾತಾತ್ಪರ್ಯನ್ಯಾಯದೀಪಿಕಾಭಾವದೀಪ 5.ಪ್ರಮಾಣಲಕ್ಷಣ-ಟೀಕಾಟಿಪ್ಪಣಿ 6.ಕಥಾಲಕ್ಷಣಟೀಕಾಟಿಪ್ಪಣಿ 7.ತತ್ತ್ವಸಂಖ್ಯಾನಟೀಕಾಭಾವದೀಪ 8.ವಿಷ್ಣುತತ್ತ್ವ-ನಿರ್ಣಯಟೀಕಾಭಾವದೀಪ 9.ತತ್ತ್ವೋದ್ಯೋತಟೀಕಾಭಾವದೀಪ 10.ಕರ್ಮನಿರ್ಣಯಟೀಕಾ ಭಾವದೀಪ 11.ಪ್ರಮಾಣಪದ್ಧತಿಟಿಪ್ಪಣಿ 12.ವಾದಾವಲೀಟಿಪ್ಪಣಿ 13.ತರ್ಕತಾಂಡವಟಿಪ್ಪಣಿ 14.ಚಂದ್ರಿಕಾಪ್ರಕಾಶ 15.ತತ್ತ್ವಮಂಜರೀ 16.ಮಂತ್ರಾರ್ಥಮಂಜರೀ 17.ಗೀತಾವಿವೃತಿ 18.ತಂತ್ರದೀಪಿಕಾ 19.ನ್ಯಾಯಮುಕ್ತಾವಲೀ 20.ಈಶ-ಕೇನ-ಕಾಠಕ-ಪ್ರಶ್ನ-ಅಥರ್ವಣ ಮಾಂಡೂಕ - ತೈತ್ತರೀಯ - ಐತರೇಯ - ಛಾಂದೋಗ್ಯ - ಬೃಹದಾರಣ್ಯಖಂಡಾರ್ಥ 21.ಪ್ರಮೇಯಸಂಗ್ರಹ 22.ಪುರುಷಸೂಕ್ತವ್ಯಾಖ್ಯಾನ 23.ಅಂಭೃಣೀಸೂಕ್ತವ್ಯಾಖ್ಯಾನ 24.ಹಿರಣ್ಯಗರ್ಭಸೂಕ್ತವ್ಯಾಖ್ಯಾನ 25.ಭಾಟ್ಟಸಂಗ್ರಹ

**ಸತ್ಯಪ್ರಿಯತೀರ್ಥರು**

ಮಧುರಭಾಷೆ ಹಾಗು ಸುಬದ್ಧ ವಿಷಯನಿರೂಪಣೆಯಿಂದ ಓದುಗರಿಗೆ ಮುದ ನೀಡುವ ಇವರ ಕೃತಿಗಳು ನಿಜಕ್ಕೂ ಅನಿತರಸಾಧಾರಣವಾದವುಗಳು. ಶ್ರೀಮದುತ್ತರಾದಿಮಠದ ಮೂಲಪರಂಪರೆಯಲ್ಲಿ ಬಂದ ಶ್ರೀ ಸತ್ಯವಿಜಯತೀರ್ಥರ ಶಿಷ್ಯರು. ಇವರು ರಚಿಸಿದ ಜಯತೀರ್ಥಸ್ತುತಿಯಿಂದಲೇ ಇವರ ಪಾಂಡಿತ್ಯವೇನೆಂಬುದು ವೇದ್ಯವಾಗುತ್ತದೆ.

1.ಮಹಾಭಾಷ್ಯವ್ಯಾಖ್ಯಾನ. 2.ಮಾಂಡೂಕೋಪನಿಷದ್ಭಾಷ್ಯಟಿಪ್ಪಣಿ. 3.ತತ್ತ್ವಪ್ರಕಾಶಿಕಾ-ವಿವೃತಿ. 4.ಚಂದ್ರಿಕಾಬಿಂದು. ಇದಲ್ಲದೆ ಇನ್ನೂ ಅನೇಕ ಉಪನಿಷತ್ತುಗಳಿಗೆ ಇವರು ವ್ಯಾಖ್ಯಾನವನ್ನು ರಚಿಸಿದ್ದಾರೆ. ಘನಶ್ಯಾಮಕವಿ ರಚಿಸಿದ ಪ್ರಚಂಡರಾಹೂದಯ ಎಂಬ ನಾಟಕ ಇವರ ಜೀವನದ ಮೇಲೆ ಬೆಳಕು ಚೆಲ್ಲುವ ಕೃತಿಯಾಗಿದೆ.

**ವರದತೀರ್ಥರು**

ವರದತೀರ್ಥರ ಕಾಲಮಾನಗಳ ಬಗ್ಗೆ ಆಗಲಿ ಗ್ರಂಥಗಳ ಕುರಿತಾಗಿ ಆಗಲಿ ವಿಶೇಷ ಮಾಹಿತಿಗಳು ದೊರೆತಿರುವದಿಲ್ಲ. ಕೆಲವು ಉಪನಿಷತ್ತುಗಳಿಗೆ ಇವರ ವ್ಯಾಖ್ಯಾನ ಇರುವದು ಖಚಿತವಾಗಿದ್ದು ಪ್ರಕೃತ ತಲವಕಾರೋಪನಿಷದ್ಭಾಷ್ಯಕ್ಕಿರುವ ವ್ಯಾಖ್ಯಾನವು ಪೂರ್ಣವಾಗಿ ದೊರೆತಿರುತ್ತದೆ. ಉಪನಿಷತ್ತಿನ ಮೂರು ಖಂಡಗಳ ಮಂತ್ರಾರ್ಥಮಾತ್ರ ದೊರಕ್ಕಿದ್ದು ಅಷ್ಟು ಭಾಗವನ್ನು ಮುದ್ರಣಗೊಳಿಸಲಾಗಿದೆ.

## ಕೃತಜ್ಞತಾ ಸಮರ್ಪಣೆ.

ಈ ಪ್ರಕಾಶನದ ಸರ್ವಾಂಗೀಣ ಸಮೃದ್ಧಿಯ ಸೂತ್ರಧಾರಕರಾದ ಪ್ರಾತಃಸ್ಮರಣೀಯರಾದ ಪರಮಪೂಜ್ಯರಾದ **ಶ್ರೀ1008ಶ್ರೀಸತ್ಯಪ್ರಮೋದತೀರ್ಥಶ್ರೀಪಾದಂಗಳವರ** ಚರಣಾರವಿಂದಗಳಲ್ಲಿ ಭಕ್ತಿಶ್ರದ್ಧಾಪೂರ್ವಕವಾದ ಅನಂತಾನಂತ ಸಾಷ್ಟಾಂಗ ಪ್ರಣಾಮಗಳು.

ಶ್ರೀ1008 ಶ್ರೀಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಸುದೀರ್ಘ ತಪಸ್ಸಿನ ಫಲವೇ ಈ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು. ಈ ಗುರುಗಳ ಕಾಯಕ್ಕೆ ಆಹಾರಬೇಕಿಲ್ಲ ಲೌಕಿಕವಿಹಾರ ಸೇರಲ್ಲ. ನಿರಾಹಾರದಿ ಹರಿಯ ಹಿರಿಮೆ ಗರಿಮೆಗಳನ್ನರಿತು ವಿಹರಿಸುವದೇ ಇವರ ಆಹಾರ. ಇವರು ಎಷ್ಟು ಸಂಪ್ರದಾಯನಿಷ್ಠರೋ ಅಷ್ಟೇ ಆಧುನಿಕರು. ಪ್ರಾಚೀನ ಪದ್ಧತಿಯ ಪಾಠ ಒಂದೆಡೆ, ಮುಗ್ಧಮಕ್ಕಳ ಶಾಲೆ ಮತ್ತೊಂದೆಡೆಗೆ. ವಿದ್ಯಾರ್ಥಿವೇತನಕ್ಕಾಗಿ ಶ್ರೀಸತ್ಯಪ್ರಮೋದ-ತೀರ್ಥರು ಸ್ಥಾಪಿಸಿದ ಜಯಸತ್ಯಪ್ರಮೋದನಿಧಿಯ ಪೋಷಣೆ. ಬಹುಭಾಷಾ ಉಪನ್ಯಾಸಗಳು, ಪುಸ್ತಕ ಮುದ್ರಣ, ಶ್ರೀಸುಧಾ ಮಾಸಪತ್ರಿಕೆಯ ಪ್ರಕಟಣೆ, ಸಂಶೋಧನಾ ಕೇಂದ್ರ ಸ್ಥಾಪನೆ, ಶ್ರೀಜಯತೀರ್ಥವಿದ್ಯಾಪೀಠದ ಸರ್ವಾಂಗೀಣ ಅಭಿವೃದ್ಧಿ, ಉದ್ಯೋಗಕೇಂದ್ರ-ವೃದ್ಧಾಶ್ರಮ -ಗೋಶಾಲೆ- ವಧುವರಾನ್ವೇಷಣಾಕೇಂದ್ರಸಂಸ್ಥಾಪನೆ ಹೀಗೆ ಹತ್ತೇ ಇಪ್ಪತ್ತೇ ನೂರಾರು ಕಾರ್ಯಗಳು ಇವರ ಮಂದಹಾಸದ ಹಸುಗೂಸುಗಳು. ಹೀಗೆ ತಮ್ಮ ಹಸನ್ಮುಖದಿಂದ

ಸಮಗ್ರಸಮಾಜವನ್ನು ಸಂತೈಸುವ ಭಗವಂತನ ಚಲಪ್ರತಿಮೆ ಇವರು. ಈ ಗುರುಗಳು ಈಗಾಗಲೇ ಸಮಾಜಕ್ಕಾಗಿ, ವಿದ್ಯಾರ್ಥಿಗಳಿಗಾಗಿ 'ನೂರಾರು ಗ್ರಂಥಗಳನ್ನು ಪ್ರಕಾಶಿಸಿ ಪರಮಾನುಗ್ರಹ ಮಾಡಿರುತ್ತಾರೆ. ನನ್ನಂತಹ ನೂರಾರು ವಿದ್ಯಾರ್ಥಿಗಳಿಗೆ ಪ್ರತಿನಿತ್ಯದಲ್ಲೂ ಅನ್ನ ವಸ್ತ್ರಗಳನ್ನಿತ್ತು ಪಾಠವನ್ನು ಹೇಳಿ ಸನ್ಮಾರ್ಗತೋರಿ ಸಾಧನಮಾರ್ಗದಲ್ಲಿ ನಡೆಸುತ್ತಿರುವ ನನ್ನ ಸ್ವರೂಪೋದ್ಧಾರಕಗುರುಗಳಿಗೆ ಮತ್ತೊಮ್ಮೆ ಭಕ್ತಿಶ್ರದ್ಧಾಪೂರ್ವಕವಾದ ಅನಂತಾನಂತ ಶಿರಸಾಷ್ಟಾಂಗ ಪ್ರಣಾಮಗಳು.

ಬಿಡುವಿಲ್ಲದೇ ಭಾಗವತಾದಿ ಬರಹಗಳಲ್ಲಿ ತಲ್ಲೀನರಾದ ತಮ್ಮ ತುಂಬು ಅಂತಃಕರಣ ಹಾಗು ಅಮೂಲ್ಯಹಿತವಚನಗಳಿಂದ ನನ್ನ ಏಳಿಗೆಗೆ ಕಾರಣರಾದ ಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಪಂ.ಪೂ.ಆಚಾರ್ಯ(ಪಂ.ಗುತ್ತಲ್‌ರಂಗಾಚಾರ್ಯ)ರವರಿಗೆ ಶಿರಸಾಷ್ಟಾಂಗ ಪ್ರಣಾಮಗಳು. ಸಂಶೋಧನೆಯ ಎಲ್ಲ ಹಂತಗಳಲ್ಲಿ ಸೂಕ್ತಸಲಹೆಗಳನ್ನು ನೀಡುತ್ತ ಬಂದಿರುವ ಪಂ.ವಿದ್ಯಾಧೀಶಾಚಾರ್ಯರಿಗೆ ನನ್ನ ಸಾಷ್ಟಾಂಗಪ್ರಣಾಮಗಳು.

ಈ ನನ್ನ ಪ್ರಥಮಪ್ರಯತ್ನದಲ್ಲಾದ ಅಕ್ಷರದೋಷಗಳನ್ನು ತಿದ್ದಿ ಸರಿಯಾಗಿ ಮಾರ್ಗದರ್ಶನಮಾಡಿದ ಪಂ.ನರಸಿಂಹಾಚಾರ್ಯಕಟ್ಟಿ ಹಾಗೂ ಪಂ. ವಾದಿರಾಜಾಚಾರ್ಯ ಕರಣಂ ಇವರಿಗೆ ನನ್ನ ಅನೇಕ ನಮನಗಳು.

**ಉಪಕಾರಸ್ಮರಣೆ**

ಈಗ ಮುದ್ರಣಗೊಳ್ಳುತ್ತಿರುವ ಈ ಉಪನಿಷತ್ತಿಗೆ ಒಟ್ಟು ಎಂಟು ವ್ಯಾಖ್ಯಾನಗಳು ದೊರತದ್ದು ಅವುಗಳನ್ನು ಕಲ್ಪಿಸಿದ ಮಹನೀಯರನ್ನು ಈ ಸಂದರ್ಭದಲ್ಲಿ ಸ್ಮರಿಸುವದು ನನ್ನ ಆದ್ಯಕರ್ತವ್ಯವೆಂದು ಭಾವಿಸಿರುತ್ತೇನೆ. ವ್ಯಾಸತೀರ್ಥರು ರಚಿಸಿದ 'ವಿವರಣ' ಎನ್ನುವ ವ್ಯಾಖ್ಯಾನವನ್ನು 'ಶ್ರೀ ಸತ್ಯಪ್ರಮೋದತೀರ್ಥಪುಸ್ತಕಭಂಡಾರ ಬೆಂಗಳೂರು ಇಲ್ಲಿಂದ ಪಡೆದಿರುತ್ತೇನೆ. ಇದು ನಮ್ಮ ಪರಮಗುರುಗಳಾದ ಶ್ರೀ1008ಶ್ರೀಸತ್ಯಪ್ರಮೋದತೀರ್ಥರ ಅಪೂರ್ವಹಸ್ತಪ್ರತಿಗಳ ಸಂಗ್ರಹದಲ್ಲಿ ಒಂದಾಗಿದೆ. ಇದರ ಜೊತೆಗೆ ವೇದೇಶತೀರ್ಥರು ರಚಿಸಿದ ''ವಿವರಣ''ಎನ್ನುವ ವ್ಯಾಖ್ಯಾನ, ಮತ್ತು ಅವರೇ ರಚಿಸಿದ ಶ್ರುತ್ಯರ್ಥ ಹಾಗು ರಾಘವೇಂದ್ರಸ್ವಾಮಿಗಳು ರಚಿಸಿದ ಉಪನಿಷತ್‌ಖಂಡಾರ್ಥ ಇವುಗಳ ಜೊತೆಗೆ ಇಲ್ಲಿಯ ವರೆಗೆ ಮುದ್ರಣವಾಗದೇ ಇರುವ ಶ್ರೀಸತ್ಯಪ್ರಿಯತೀರ್ಥರು ರಚಿಸಿದ ''ತಲವಕಾರೋಪನಿಷತ್ ಭಾಷ್ಯವಿವೃತಿ'' ಈ ಎಲ್ಲ ಹಸ್ತಪ್ರತಿಗಳನ್ನು ಕರುಣಿಸಿದ ಪರಮಪೂಜ್ಯರಾದ ಪ್ರಸ್ತುತ ಪೀಠದಲ್ಲಿ ವಿರಾಜಮಾನರಾದ ಶ್ರೀ1008ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಅನಂತಾನಂತ ವೇದೋಕ್ತ ಸಾಷ್ಟಾಂಗ ಪ್ರಣಾಮಗಳು.

ಶ್ರೀಮದುತ್ತರಾದಿಮಠಾಧೀಶರಾದ ಶ್ರೀ1008ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರ ಶಿಷ್ಯರಾದ ನರಸಿಂಹ ಭಿಕ್ಷುಗಳು ರಚಿಸಿದ 'ನರಸಿಂಹ ಪ್ರಕಾಶಿಕಾ' ಎಂಬ ಹಸ್ತಪ್ರತಿಯನ್ನು ಡಾ.ವ್ಯಾಸನಕೆರೆ ಪ್ರಭಂಜನಾಚಾರ್ಯರು ನೀಡಿರುತ್ತಾರೆ. ಅವರ ಉಪಕಾರ ಅವಿಸ್ಮರಣೀಯ.

ಅವರಿಗೂ ನನ್ನ ಅನೇಕ ನಮಸ್ಕಾರಗಳು. ಜೊತೆಗೆ ವಾಮನಪಂಡಿತರು ರಚಿಸಿದ ತಲವಕಾರೋಪನಿಷಟ್ಟೀಕಾ ಎನ್ನುವ ವ್ಯಾಖ್ಯಾನವನ್ನು ಬನ್ನಂಜೆ ಗೋವಿಂದಾಚಾರ್ಯರ ಈಶಾವಾಸ್ಯಪ್ರತಿಷ್ಠಾನದಿಂದ ಮುದ್ರಣಗೊಂಡ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ. ಈ ಪ್ರಾಚೀನವ್ಯಾಖ್ಯಾನವನ್ನು ಮುದ್ರಣಗೊಳಿಸಿ ಓದುಗರಿಗೆ ವಿಶೇಷ ಅನುಕೂಲಮಾಡಿದ ಪಂ.ಬನ್ನಂಜೆ ಗೋವಿಂದಾಚಾರ್ಯರಿಗೆ ನನ್ನ ಅನೇಕ ನಮಸ್ಕಾರಗಳು. ಗ್ರಂಥ ಬಿಡುಗಡೆ ಆಗುವ ಹಂತದಲ್ಲಿರುವಾಗ ವರದತೀರ್ಥರು ರಚಿಸಿದ ಭಾಷ್ಯವ್ಯಾಖ್ಯಾನವು ದೊರತಿದ್ದು ಅದನ್ನು ಸರಿಯಾಗಿ ಬರೆದು ಕೊಟ್ಟು ಆ ವ್ಯಾಖ್ಯಾನದ ಪ್ರಕಟಣೆಗೆ ಸಹಕರಿಸಿದ ಶ್ರೀಯುತರಾದ ಕೃಷ್ಣಮೂರ್ತಿಗಳಿಗೂ ನನ್ನ ನಮಸ್ಕಾರಗಳು.

ಕರಡುಪ್ರತಿಯನ್ನು ತಿದ್ದುವದಕ್ಕಾಗಿ ಕೇಳಿದಾಗಲೆಲ್ಲ ಸಹಾಯ ಮಾಡಿದ ಪಂ ವೇದವ್ಯಾಸಾಚಾರ್ಯ ಇಟಗಿ ಹಾಗು ಅರುಣಾಚಾರ್ಯ ಕಾಖಂಡಕಿ ಇವರಿಗೆ, ಈ ಗ್ರಂಥ ಅಚ್ಚುಕಟ್ಟಾಗುವಂತೆ ಜೋಡಣೆ ಮಾಡಿದ ಪಂ ಮಹಿದಾಸಾಚಾರ್ಯ ಜೋಷಿ ಇವರಿಗೆ, ಸುಂದರವಾಗಿ ಮುಖಪುಟವಿನ್ಯಾಸ ಮಾಡಿದ ಶ್ರೀ ಕೆ.ಎಮ್. ಶ್ರೇಷಗಿರಿ ಇವರಿಗೆ, ಸಮಯಕ್ಕೆ ಸರಿಯಾಗಿ ಓರಣವಾಗಿ ಮುದ್ರಿಸಿದ ರಾಷ್ಟ್ರೋತ್ಥಾನ ಮುದ್ರಣಾಲಯದವರಿಗೆ ನನ್ನ ಕೃತಜ್ಞತೆಗಳು. ಈ ಪುಸ್ತಕಕ್ಕೆ ಧನಸಹಾಯ ಮಾಡಿದ ಶ್ರೀಯುತ ವೆಂಕಟರಾವ್ ಶೆಡಂಬಿ ಕುಟುಂಬ ಹಾಗೂ ಶ್ರೀಯುತ ಗಿರೀಶ್ ನಾಯಕ್ ದಂಪತಿಗಳಿಗೆ, ಪರೋಕ್ಷ ಅಪರೋಕ್ಷವಾಗಿ ಸಹಕರಿಸಿದ ಎಲ್ಲ ಆಧ್ಯಾತ್ಮ ಬಂಧುಗಳಿಗೂ ಮತ್ತೊಮ್ಮೆ ಹೃತ್ಪೂರ್ವಕ ಕೃತಜ್ಞತೆಗಳು.

ಗುರುಪಾದಪದ್ಮಾರಾಧಕ

ಬಿ.ಆರ್.ವೆಂಕಟೇಶ.

# ತಲವಕಾರೋಪನಿಷತ್ ಸಾರಸಂಗ್ರಹ

ದೇಶವನ್ನಾಳುವ ರಾಜಮಹಾರಾಜರ ಗುಣಗಳು ಅವರ ರಾಷ್ಟ್ರಕ್ಕೆ ಮಾತ್ರ ಸೀಮಿತವಾಗಿರುತ್ತವೆ. ಅದೂ ಅವರು ಬದುಕಿರುವವರೆಗೆ. ಆದರೆ ಜಗದೊಡೆಯನ ಆಡಿಯಿಂದಾರಂಭಗೊಂಡು ಮುಡಿಯವರೆಗಿರುವ ಗುಣಗಳು ಸಮುದ್ರದ ನೀರಿನ ಕಣಗಳಂತೆ ಅನಂತ. ಇಷ್ಟು ಮಾತ್ರವಲ್ಲ, ಮತ್ತೆ ಆ ಅನಂತಗುಣಗಳು ಎಲ್ಲ ದೇಶ ಎಲ್ಲ ಕಾಲದಲ್ಲಿ ಒಂದೊಂದೂ ಪರಿಪೂರ್ಣ. ಇದು ಇನ್ನೊಬ್ಬರಲ್ಲಿ ಕಾಣದ ಆ ಭಗವಂತನ ವಿಲಕ್ಷಣ ಲಕ್ಷಣ. ಹೀಗೆ ಅನಂತಗುಣಗಳಿಂದ ವಿಲಕ್ಷಣನೆನಿಸಿದ ಭಗವಂತನು ದೇವತೆಗಳಿಗೂ ಪೂರ್ಣವಾಗಿ ನಿಲುಕದವನಾಗಿರುತ್ತಾನೆ. ಅಂತಹ ಅಚಿಂತ್ಯನ ಚಿಂತನೆಯನ್ನು ಶ್ರೀಮದಾಚಾರ್ಯರು ತಮ್ಮ ಭಾಷ್ಯದ ಮಂಗಲಪದ್ಯದಿಂದ ತಿಳಿಸುತ್ತಿದ್ದಾರೆ.

ಅನಂತಗುಣಪೂರ್ಣತ್ವಾದಗಮ್ಯಾಯ ಸುರೈರಪಿ ।
ಸರ್ವೇಷ್ಟದಾತ್ರೇ ದೇವಾನಾಂ ನಮೋ ನಾರಾಯಣಾಯ ತೇ ॥

ಇಲ್ಲಿ ಆಚಾರ್ಯರು ಮಂಗಲಪದ್ಯವನ್ನು ನಿವೇಶನ ಮಾಡಿರುವ ಔಚಿತ್ಯಹೀಗಿದೆ. ತಾವು ವಿಘ್ನರಹಿತರಾಗಿದ್ದರೂ ಇದನ್ನು ಅಧ್ಯಯನ ಮಾಡುವ ಶಿಷ್ಯರು ವಿಘ್ನಗಳಿಗೆ ಸಿಲುಕದೇ ತತ್ತ್ವಜ್ಞಾನವನ್ನು ಪಡೆಯಲಿ ಎಂಬ ಕರುಣೆ ಹಾಗು ಹರಿಯ ಆಜ್ಞೆಯ ಮೇರೆಗೆ ಭಾಷ್ಯದ ಆರಂಭದಲ್ಲಿ ಮಂಗಲಪದ್ಯವನ್ನು ನಿಬಂಧನೆ ಮಾಡಿರುತ್ತಾರೆ. ಜೊತೆಗೆ ಶಿಷ್ಯರಾದವರು ಗ್ರಂಥವನ್ನು ರಚಿಸುವಾಗ ಮಂಗಲಾಚರಣೆ ಮಾಡಬೇಕು ಎಂಬ ಶಿಷ್ಟಾಚಾರವೂ ಇದಕ್ಕೆ ಹಿನ್ನಲೆಯಾಗಿದೆ. ಉಪನಿಷತ್ತಿನ ಸಾರವೆನಿಸುವ ಎರಡು ಪ್ರಧಾನ ಅಂಶಗಳನ್ನು ಪ್ರತಿಬಿಂಬಿಸಿರುವದರ ಮೂಲಕ ಈ ಭಾಷ್ಯದ ಮಂಗಲಪದ್ಯವನ್ನು ಮತ್ತಷ್ಟು ಮೆರಗುಗೊಳಿಸಿರುವದು ಇನ್ನೊಂದು ಗಮನಾರ್ಹ ವಿಷಯವಾಗಿರುತ್ತದೆ.

ಎಲ್ಲೆಯೇ ಇಲ್ಲದ ಗುಣಗಳಿಂದ ಮಂಡಿತನಾದ ಪರಬ್ರಹ್ಮನನ್ನು ಬ್ರಹ್ಮಾದಿಸಮಸ್ತ ದೇವತೆಗಳು ತಿಳಿಯಲು ಪ್ರಯತ್ನಿಸಿದರೂ ಅವರ ತಿಳುವಳಿಕೆಗೆ ನಿಲುಕದೇ ಉಳಿದವನು ಎನ್ನುವದು 'ಅನಂತಗುಣಪೂರ್ಣತ್ವಾತ್' ಎನ್ನುವದರಿಂದ ತಿಳಿದು ಬರುತ್ತದೆ. 'ಸರ್ವೇಷ್ಟದಾತ್ರೇ ದೇವಾನಾಂ' ಎನ್ನುವ ವಿಶೇಷಣದಿಂದ 'ಉಮೆಯ ಮೂಲಕ ಜ್ಞಾನವನ್ನು ಉಪದೇಶಿಸಿ ದೇವತೆಗಳಿಗೆ ಯೋಗ್ಯವಾದ ಇಷ್ಟಾರ್ಥಗಳನ್ನು ಕೊಡುವವನು, ಎಂಬ ಮತ್ತೊಂದು ವಿಷಯವು ತಿಳಿದು ಬರುತ್ತದೆ. ಹೀಗೆ ಆಚಾರ್ಯರ ಭಾಷ್ಯದಲ್ಲಿ ಉಪನಿಷತ್ತಿನ ಎರಡು ಪ್ರಧಾನ ಅಂಶಗಳ ಪ್ರಸ್ತಾವನೆಯು ಬಹಳ ಸೊಗಸಾಗಿ ಪ್ರತಿಬಿಂಬಿತವಾಗಿರುತ್ತದೆ.

ಇಲ್ಲಿ ಸತ್ಯಪ್ರಿಯತೀರ್ಥರು 'ಸರ್ವೇಷ್ಟದಾತ್ರೇ ದೇವಾನಾಂ' ಎನ್ನುವ ಭಾಷ್ಯದ ಮಾತಿಗೆ ದೇವತೆಗಳಿಗೆ ಇಷ್ಟವಾದ ಜ್ಞಾನವನ್ನು ಕೊಡುವ ನಾರಾಯಣನಿಗೆ ನಮಸ್ಕಾರವು ಎನ್ನುವ ಅರ್ಥದ ಜೊತೆಗೆ ಮತ್ತೊಂದು ವಿಷಯವನ್ನು ಪ್ರಸ್ತುತ ಪಡಿಸಿರುತ್ತಾರೆ. 'ಸರ್ವೇಷ್ಟದಾತ್ರೇ

ದೇವಾನಾಮ್' ಎನ್ನುವಲ್ಲಿ ದೇವಾನ್, ಆಮ್, ನಮಃ ಎಂದು ಪದವಿಭಾಗಮಾಡಿ 'ತತ್ರ ದೇವಾನ್ ಪ್ರತಿ ಸರ್ವೇಷ್ಟದಾತ್ರೇ ಇತಿ ಯೋಜನಾ' ಎಂದಿದ್ದಾರೆ. ಅಂದರೆ ಅನಂತಗುಣ ಪೂರ್ಣತ್ವಾತ್, ದೇವಾನ್ ಪ್ರತಿ ಸರ್ವೇಷ್ಟದಾತ್ರೇ=ಯಾವ ಕಾರಣಕ್ಕೆ ಅನಂತಗುಣಪೂರ್ಣನು ದೇವತೆಗಳಿಗೆ ಇಷ್ಟವಾದದ್ದನ್ನು ಕೊಡುವವನೋ, ಆಮ್=ಆ ಕಾರಣ ಅವನು ನಾರಾಯಣಶಬ್ದವಾಚ್ಯನು. ಇದರಿಂದ ಪರಮಾತ್ಮನಿಗೆ ನಾರಾಯಣ ಎಂಬ ಹೆಸರು ಪಶ್ವಾದಿಶಬ್ದಗಳಂತೆ ಕೇವಲ ಸಾಂಕೇತಿಕವಾಗಿಲ್ಲ ಎನ್ನುವದು ಸೂಚಿತವಾಗುತ್ತದೆ. 'ನಾರಂ ದೇವೇಷ್ಟಂ ಆಪಯತಿ ಪ್ರಾಪಯತಿ ಇತಿ ನಾರಾಯಣಃ' ಎನ್ನುವ ವ್ಯುತ್ಪತ್ತಿಯಿಂದ ದೇವೇಷ್ಟದಾತೃತ್ವವು ನಾರಾಯಣಶಬ್ದದಲ್ಲಿ ಅಡಗಿದೆ ಎನ್ನುತ್ತಾರೆ ಸತ್ಯಪ್ರಿಯತೀರ್ಥರು.

**ನಮೋ ನಾರಾಯಣಾಯ ತೇ**

'ಣಮು ಪ್ರಹ್ವತ್ವೇ ಶಬ್ದೇ ಚ' ಎಂಬಂತೆ ನಮಧಾತುವಿಗೆ ಪ್ರಹ್ವೀಭಾವ ಎಂದರೆ ಬಾಗುವದು, ಮತ್ತು ನಮಃ ಎಂಬ ಶಬ್ದವನ್ನು ಉಚ್ಚರಿಸುವದು ಎಂದು ಅರ್ಥ. ಶರೀರ ಹಾಗೂ ಮನಸ್ಸುಗಳು ಭಗವಂತನ ಅಡಿಗೆ ಭಕ್ತಿಯಿಂದ ಬಡಿಯಬೇಕು. ಜೊತೆಗೆ ನಿನಗೆ ನಮಸ್ಕಾರ ಎಂದು ಮಾತಿನಲ್ಲಿ ಹೇಳುವದರಿಂದ ಕಾಯಿಕ-ವಾಚಿಕ-ಮಾನಸಿಕ ಎನ್ನುವ ತ್ರಿಕರಣಪೂರ್ವಕವಾದ ನಮಸ್ಕಾರವೇ ಹೇಳಿದಂತಾಗಿರುತ್ತದೆ ಎನ್ನುವದು ನಮಃ ಎಂಬ ಶಬ್ದಪ್ರಯೋಗದಿಂದ ಸೂಚಿತವಾಗಿರುತ್ತದೆ. ಇಲ್ಲಿ ನಿನಗೆ ಎನ್ನುವದರಿಂದ ಆಚಾರ್ಯರು ತೋರಿಸಿರುವ ಸ್ವಾರಸ್ಯವೆಂದರೆ ಎಲ್ಲರಂತೆ ಕಣ್ಣಿಗೆ ಕಾಣದ ಹರಿಯನ್ನು ನಾನು ನಮಸ್ಕರಿಸುತ್ತಿಲ್ಲ ಪ್ರತ್ಯಕ್ಷವಾಗಿ ಕಂಡು ಹರಿಯನ್ನು ನಮಸ್ಕರಿಸುತ್ತಿದ್ದೇನೆ, ಎಂಬುದು.

ಪ್ರಪಂಚವು ಅಸ್ತಿತ್ವಕ್ಕೆ ಬರುವ ಮುನ್ನವೇ ನಾರ=ಪ್ರಳಯಕಾಲದ ನೀರಿನಲ್ಲಿ ಅಯನ= ಮಲಗಿದವನು. ಅವನೇ ಎಲ್ಲರಿಗಿಂತಲೂ ಮೊದಲಿದ್ದವನು. ಎಲ್ಲರನ್ನೂ ತಿಳಿದವನು ಎಲ್ಲರಿಗಿಂತಲೂ ಉತ್ತಮನು. ಅವನೇ ಸರ್ವೋತ್ತಮನು ಅವನಿಗೆ ಈ ನಮಸ್ಕಾರವು.

**ವೈಜಯಂತೇ ಸಮಾಸೀನಮ್**

ಪರಬ್ರಹ್ಮನನ್ನು ತಿಳಿಯಲು ಬಯಸಿದ ರುದ್ರದೇವರು ಚತುರ್ಮುಖನ ವಾಸಸ್ಥಾನವಾದ ವೈಜಯಂತದಲ್ಲಿರುವ ಬ್ರಹ್ಮನನ್ನು ಸಮೀಪಿಸಿ ಪ್ರಶ್ನಿಸಿದರು, ಎನ್ನುವದು ಈ ಉಪನಿಷತ್ತಿನ ಪೂರ್ವವೃತ್ತಾಂತ. ಇಲ್ಲಿ ವೈಜಯಂತೇ ಸಮಾಸೀನಮ್ ಎನ್ನುವ ಆಚಾರ್ಯರ ಭಾಷ್ಯದ ಮಾತಿಗೆ ವ್ಯಾಖ್ಯಾನಕಾರರು ನೀಡಿರುವ ಅರ್ಥಗಳು ಈ ಕೆಳಗಿನಂತಿವೆ.

ವೈಜಯಂತ ಎನ್ನುವದು ಒಂದು ಪರ್ವತದ ಹೆಸರು ಎನ್ನುತ್ತಾರೆ ಶ್ರೀವ್ಯಾಸತೀರ್ಥರು ಹಾಗೂ ವಾಮನಪಂಡಿತರು. ಇದಕ್ಕೆ ವಿಭಿನ್ನವಾಗಿ ವೇದೇಶತೀರ್ಥರು ಅಂತರಿಕ್ಷದಲ್ಲಿರುವ ಬ್ರಹ್ಮಸದನವೆಂದೂ ಶ್ರೀವಾದಿರಾಜರು ಮೇರುಪರ್ವತದ ತುದಿಯಲ್ಲಿರುವ ಚತುರ್ಮುಖ ಬ್ರಹ್ಮದೇವರ ಆವಾಸಸ್ಥಾನವೆಂದೂ ವ್ಯಾಖ್ಯಾನಿಸಿರುತ್ತಾರೆ. ಈ ಮೂರೂ ಅರ್ಥಗಳನ್ನು ಒಟ್ಟುಗೂಡಿಸಿ ಹೀಗೆ ತಿಳಿಯಬಹುದು.

ಲೋಕದಲ್ಲಿ ಕೆಲವರು ಗುಹೆಯಲ್ಲಿ, ಮತ್ತೇ ಕೆಲವರು ನೀರಿನಲ್ಲಿ, ಇನ್ನು ಕೆಲವರು ಪರ್ವತಗಳಲ್ಲಿ ವಾಸಿಸುತ್ತಾರೆ ಎನ್ನುವದು ಸರ್ವವಿದಿತವಾದ ವಿಷಯ. ಯಾವ ವ್ಯಕ್ತಿಯು ಯಾವ ಸ್ಥಳದಲ್ಲಿ ವಾಸಿಸುತ್ತಾನೆಯೋ ಅದುವೇ ಅವನ ಆವಾಸಸ್ಥಾನ. ಬ್ರಹ್ಮದೇವರು ಮೇರುಪರ್ವತದ ಮನೆಯೊಂದರಲ್ಲಿ ವಾಸಿಸುತ್ತಾರೆ ಎಂದು ಹೇಳಿದ್ದರೂ ಅದು ಪರ್ವತದ ಒಂದು ಭಾಗವೇ ಆದದ್ದರಿಂದ ಅದನ್ನು ಪರ್ವತವೆಂದು ಹೇಳಿದ್ದರಲ್ಲಿ ತಪ್ಪೇನು ಆಗಲಾರದು. ಇನ್ನು ಮೇರುಪರ್ವತದ ತುದಿಯಲ್ಲಿರುವ ಬ್ರಹ್ಮದೇವರಮನೆ ಎನ್ನುವ ಮಾತಿಗೂ ಅಂತರಿಕ್ಷದಲ್ಲಿರುವ ಬ್ರಹ್ಮದೇವರಮನೆ ಎನ್ನುವ ಮಾತಿಗೂ ಹೊಂದಾಣಿಕೆಯನ್ನು ಹೀಗೆ ಹೇಳಬಹುದು. ಮೇರುಪರ್ವತದ ಎತ್ತರ ಒಂದು ಲಕ್ಷಯೋಜನ ಎನ್ನುತ್ತದೆ ಶ್ರೀಮದ್ಭಾಗವತವು. ಆದರಲ್ಲಿಯೂ ಭೂಮಿಯ ಮೇಲ್ಭಾಗದಲ್ಲಿ 84 ಸಾವಿರಯೋಜನವು, ಭೂಮಿಯ ಕೆಳಗೆ 16 ಸಾವಿರ ಯೋಜನವು ಹರಡಿಕೊಂಡಿದೆ. 84ಸಾವಿರ ಯೋಜನೆ ಎತ್ತರದಲ್ಲಿರುವ ಈ ಪರ್ವತವು ತನ್ನ ಶಿರೋಭಾಗವನ್ನು ಅಂತರಿಕ್ಷದಲ್ಲಿ ಚಾಚಿರುವ ಸಾಧ್ಯತೆಗಳಿವೆ. ಅಂದಮೇಲೆ ಮೇರುಪರ್ವತದ ತುದಿಯಲ್ಲಿರುವ ಬ್ರಹ್ಮಸದನ ಎನ್ನುವ ವ್ಯಾಖ್ಯಾನಕ್ಕೂ ಅಂತರಿಕ್ಷದಲ್ಲಿರುವ ಬ್ರಹ್ಮದೇವರಸದನ ಎನ್ನುವ ಮಾತಿಗೂ ಯಾವ ವಿರೋಧವು ಇರುವದಿಲ್ಲ.

## ಪ್ರಥಮಖಂಡ

**ಕ ಉ ದೇವೋ ಯುನಕ್ತಿ**

ನಮ್ಮ ಅಂಗಾಂಗಳಲ್ಲಿ ತುಂಬಿ ಜಗತ್ತನ್ನು ನಿಂಯತ್ರಿಸುವ ಜಗದ್ವ್ಯಾಪಿಯಾದ ವಿಷ್ಣುವಿನ ಬಗೆಗೆ ಮಹತ್ವವನ್ನು ತಿಳಿಸುವ ಈ ತಲವಕಾರೋಪನಿಷತ್ತು ನಮ್ಮ ಮುಂದೆ ಪ್ರಸ್ತುತ ಪಡೆಸುವ ಪ್ರಶ್ನೆಯಿದು. ಮನಸ್ಸು ಯಾರ ಪ್ರೇರಣೆಯಿಂದ ಇಷ್ಟವಾದ ವಿಷಯಗಳೆಡೆಗೆ ಹರಿಯುತ್ತದೆ. ಯಾವನ ಪೇರಣೆಯಿಂದ ಮುಖ್ಯಪ್ರಾಣನು ಉಸಿರಾಟವನ್ನು ನಡೆಸುತ್ತಾನೆ ? ಸಕಲೇಂದ್ರಿಯ-ಗಳನ್ನು ನಿಯಂತ್ರಿಸುವ ದೇವನಾರು?

ಮನಸ್ಸು ಮೊದಲಾದ ಸಕಲೇಂದ್ರಿಯಗಳು ಜಡ. ಜಡವಾದ ಇಂದ್ರಿಯಗಳೆಂದೂ ತಾವು ಯೋಚಿಸಲಾರವು. ಅವುಗಳಿಗೊಂದು ಚೈತನ್ಯದ ಅವಶ್ಯಕತೆ ಇದೆ. ಅದು ಜೀವ ಎನ್ನಲು ಬರುವದಿಲ್ಲ. ಜೀವನಿಗೆ ಇಂದ್ರಿಯಗಳ ಸಂಪರ್ಕವೇನೋ ಇದೆ. ಆದರೆ ಇಂದ್ರಿಯಗಳ ಒಡೆತನವಿಲ್ಲ. ಕಾರಣ ಜೀವನು ಬಹಳ ಪ್ರಯತ್ನದಿಂದ ಇಂದ್ರಿಯಗಳನ್ನು ನಿಗ್ರಹಿಸಲು ಹೊರಡುತ್ತಾನೆ ಆದರೆ ಇಂದ್ರಿಯಗಳು ಪುನಃ ಪುನಃ ವಿಷಯಗಳೆಡೆಗೆ ಸಾಗಿ ಜೀವನ ಪ್ರಯತ್ನವನ್ನು ವಿಫಲಗೊಳಿಸುತ್ತವೆ. ಅನ್ನುವದಕ್ಕೆ ಜೀವ ಇಂದ್ರಿಯಗಳಿಗೆ ಒಡೆಯನಾಗಲಾರ. ಅಂದಮೇಲೆ ಜೀವನಿಗಿಂತಲೂ ಬಲಿಷ್ಠನಾದ ಮತ್ತೊಬ್ಬ ಇರಬೇಕು ಎನ್ನುವದು ನಿಜ ಎಂದಂತಾಯಿತು. ಇನ್ನು ಮುಖ್ಯಪ್ರಾಣದೇವರು ಸರ್ವಪ್ರೇರಕರು ಎನ್ನುವ ಮತ್ತೊಂದು ಪಕ್ಷವೂ ಸರಿಯಲ್ಲ. ಅವರಿಗೂ ಸ್ವತಂತ್ರವಾಗಿ ಪ್ರೇರಿಸುವ ಶಕ್ತಿಯು ಇರುವದಿಲ್ಲ. ಅಂದಮೇಲೆ ಸರ್ವಪ್ರೇರಕನು ಯಾರೆಂಬುದು ಇಲ್ಲಿ ಪ್ರಶ್ನೆ.

**ಶ್ರೋತ್ರಸ್ಯ ಶ್ರೋತ್ರಮ್**

ಈ ಪ್ರಶ್ನೆಗೆ ಬ್ರಹ್ಮದೇವರು ಸಮಾಧಾನವನ್ನು ನೀಡಿರುವ ರೀತಿ ಹೀಗಿದೆ. ನಾವು ಕಿವಿಯಿಂದ ಕೇಳುತ್ತೇವೆ. ಆ ಕಿವಿಗೆ ಶಬ್ದವನ್ನು ಸೆರೆಹಿಡಿಯುವ ಶಕ್ತಿಯನ್ನು ಕೊಟ್ಟದ್ದು ಭಗವಂತ. ಇಷ್ಟು ಮಾತ್ರವಲ್ಲ ನಾವು ಕಿವಿಯಿಂದ ನಾದವನ್ನು ಗ್ರಹಿಸುವದು ಕಿವಿಯ ಅಭಿಮಾನಿದೇವತೆಯಾದ ಚಂದ್ರ ಮೊದಲಾದ ದೇವತೆಗಳಿಂದ. ಆ ಚಂದ್ರಮೊದಲಾದ ದೇವತೆಗಳಿಗೂ ಶ್ರೋತ್ರನಿಯಮನದ ಶಕ್ತಿಯನ್ನು ಕೊಟ್ಟದ್ದು ಭಗವಂತ. ಆದ್ದರಿಂದ ಅವನು 'ಶ್ರೋತ್ರಸ್ಯ ಶ್ರೋತ್ರಮ್'. ಇದೇ ರೀತಿ ಮನಸ್ಸು. ಮನಸ್ಸಿನ ಮೂಲಕ ನಾವು ವಿಷಯಗಳನ್ನು ಗ್ರಹಿಸುವದು ಅವನಿಂದ. ಆ ಮನಸ್ಸಿನ ಅಭಿಮಾನಿದೇವತೆಗಳಿಗೆ ಮನನಶಕ್ತಿಯನ್ನು ನೀಡಿದವನೂ ಅವನೇ. ಆದ್ದರಿಂದ ಅವನು 'ಮನಸೋ ಮನಃ'. ಇದರಂತೆಯೇ ವಾಗಿಂದ್ರಿಯಕ್ಕೆ ಮಾತನಾಡುವ ಶಕ್ತಿಯನ್ನು, ವಾಗಭಿಮಾನಿದೇವತೆಗೆ ವಾಗಿಂದ್ರಿಯನಿಯಮನ ಶಕ್ತಿಯನ್ನು ಕೊಟ್ಟವನು ಭಗವಂತ. ಆದ್ದರಿಂದ ಅವನನ್ನು 'ವಾಚೋಹವಾಚಮ್'. ಎಂದು, ಇನ್ನು ಮೂಗು ಉಸಿರಾಡಿಸುವದು ಆ ಭಗವಂತನಿಂದ. ಮೂಗಿನದೇವತೆಯಾದ ಮುಖ್ಯಪ್ರಾಣ ನಮಗೆ ಉಸಿರು ನೀಡಲು ಸಮರ್ಥನಾದದ್ದು ಭಗವಂತನಿಂದ. ಅನ್ನುವದಕ್ಕಾಗಿ ಆ ಭಗವಂತನು 'ಪ್ರಾಣಸ್ಯ ಪ್ರಾಣಃ'. ಕಣ್ಣಿಗೆ ನೋಡುವ ಶಕ್ತಿಯನ್ನು ಕೊಟ್ಟದ್ದು ಭಗವಂತ. ಮಾತ್ರವಲ್ಲ ಕಣ್ಣಿನ ದೇವತೆಗೆ ಕಾಣುವ ಶಕ್ತಿಯನ್ನು ಇತ್ತವನೂ ಭಗವಂತ. ಅನ್ನುವದಕ್ಕೆ ಅವನನ್ನು 'ಚಕ್ಷುಷಃ ಚಕ್ಷುಃ' ಎನ್ನುತ್ತದೆ ಉಪನಿಷತ್ತು.

ಹೀಗೆ ವಿಷ್ಣುವನ್ನು ಎಲ್ಲ ಇಂದ್ರಿಯಗಳಿಗೆ ಹಾಗೂ ತದಭಿಮಾನಿದೇವತೆಗಳಿಗೆ ನಿಯಾಮಕನು ಎಂದು ಯಾರು ತಿಳಿಯುತ್ತಾರೆ ಅವರು ಭೌತಿಕ ಹಾಗೂ ಲಿಂಗ ಶರೀರವನ್ನು ಬಿಟ್ಟು ಮುಕ್ತರಾಗುತ್ತಾರೆ.

**न तत्र चक्षुर्गच्छति न वाग्गच्छति नो मनः ।**
**न विद्म न विजानीमो यथैतदनुशिष्यात् ॥३॥**

ಕಣ್ಣು ಮೊದಲಾದ ಇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳು ಆ ಪರಮಾತ್ಮನ ಮಾಹಾತ್ಮ್ಯವನ್ನು ಸಾಮಾನ್ಯಾಕಾರವಾಗಿಯೇ ತಿಳಿಯಲಾರರು ಎಂದಿರುವಾಗ ವಿಶೇಷವಾಗಿ ತಿಳಿಯುವದಾದರೂ ಹೇಗೆ ? ದೇವತೆಗಳ ಪಾಡೇ ಹೀಗಿರುವಾಗ ಸರ್ವಜಗತ್ತನ್ನು ಪ್ರೇರಿಸುವ ಪರಮಾತ್ಮನನ್ನು ನಾವು ತಾನೇ ಹೇಗೆ ತಿಳಿದೇವು ?

**ನ ವಿದ್ಮ ನ ವಿಜಾನೀಮಃ**

ಇಲ್ಲಿ ಸಮಾನಾರ್ಥಕವಾದ ಎರಡು ಕ್ರಿಯಾಪದಗಳನ್ನು ಪ್ರಯೋಗಿಸುವ ಮೂಲಕ ಪುನರುಕ್ತಿದೋಷಕ್ಕೆ ಎಡೆಮಾಡಿದಂತೆ ಕಾಣುತ್ತದೆ. ಇದಕ್ಕೆ ಶ್ರೀ ವೇದೇಶತೀರ್ಥರು ತಮ್ಮ ಶ್ರುತ್ಯರ್ಥದಲ್ಲಿ ನೀಡಿರುವ ಸಮಾಧಾನವು ಎಂತಹ ವಿದ್ವಾಂಸನ ಮನಸ್ಸನ್ನೂ ತಣಿಸುತ್ತದೆ.

ನಾವು ಭಗವಂತನನ್ನು ಪೂರ್ಣವಾಗಿ ತಿಳಿಯದಿದ್ದರೂ ಬ್ರಹ್ಮಪದವಿಯಲ್ಲಿ ನೀವು ಚೆನ್ನಾಗಿ ತಿಳಿದಿರಬಹುದು ಎನ್ನುವ ರುದ್ರದೇವರ ಮಾತಿಗೆ ಬ್ರಹ್ಮದೇವರು ಉತ್ತರಿಸಿರುವ ರೀತಿಯಿದು. ನಮಗೂ ಭಗವಂತ ಪೂರ್ಣವಾಗಿ ತಿಳಿದಿಲ್ಲ (ಆತ್ಮನಿ ಬಹುವಚನಂ) ಸ್ವಲ್ಪ ತಿಳಿದಿರುವದೇನೋ ನಿಜವಾದರೂ ಅದನ್ನು ಹೇಗೆ ಹೇಳಬೇಕೆಂದು ಗೊತ್ತಿಲ್ಲ. ಈ ಬಹುವಚನ ಪ್ರಯೋಗದಲ್ಲಿ ಮತ್ತೊಂದು ಔಚಿತ್ಯ ಹೀಗಿದೆ. ಭಗವಂತ ನನಗೆ ತಿಳಿದಿಲ್ಲ ಎನ್ನುವದಷ್ಟೇ ಅಲ್ಲ. ನಮಗೆ ಯಾರಿಗೂ ತಿಳಿದಿಲ್ಲ. ಶಿವನಿಂದ ಆರಂಭಗೊಂಡು ಮೊದಲಿನ ಐದು ದೇವತೆಗಳು ವಾಯು-ಭಾರತಿ, ಬ್ರಹ್ಮ-ಸರಸ್ವತಿ, ಮತ್ತು ಲಕ್ಷ್ಮೀದೇವಿಯರು ಇವರೆಲ್ಲ ಇತರದೇವತೆಗಳಿಗಿಂತ ಭಗವಂತನನ್ನು ಚೆನ್ನಾಗಿ ತಿಳಿದಿದ್ದರೂ ನಿಶ್ಶೇಷವಾಗಿ ತಿಳಿದವರಲ್ಲ. ಏನೋ ಅಲ್ಪ ಸಲ್ಪ ತಿಳಿದಿದ್ದರೂ ಅದನ್ನು ಹೇಗೆ ನಿನಗೆ ಹೇಳಬೇಕು ಎನ್ನುವದು ತಿಳಿದಿಲ್ಲ. ಎನ್ನುವದು ಈ ಮಾತಿನ ಆಂತರ್ಯ.

ಈ ಉಪನಿಷತ್ತಿನ ಮಾತಿಗೆ ರಾಘವೇಂದ್ರ ಸ್ವಾಮಿಗಳು ತಮ್ಮ ಖಂಡಾರ್ಥದಲ್ಲಿ ಹೀಗೆ ಹೇಳಿರುತ್ತಾರೆ. ಸರ್ವಜ್ಞನಾದ ಪರಿಪೂರ್ಣನಾದ ಭಗವಂತನನ್ನು ಇಂದ್ರಿಯಾಭಿಮಾನಿ ದೇವತೆಗಳು ಸಾಮಾನ್ಯಾಕಾರವಾಗಿಯೇ ತಿಳಿಯಲಾರರು ಎಂದ ಮೇಲೆ ವಿಶೇಷಾಕಾರವಾಗಿ ಹೇಗೆ ತಾನೇ ತಿಳಿದಿರುತ್ತಾರೆ. ಸರ್ವಥಾ ತಿಳಿದಿರುವದಿಲ್ಲ.

अन्यदेव तद् विदितादथो अविदितादधि ।
इति शुश्रुम पूर्वेषां ये नस्तद् व्याचचक्षिरे ॥४॥

ಪರಮಾತ್ಮನಿಗೆ ಪೂರ್ಣತ್ವವು ಹೇಗೆ ಸಂಭವಿಸುತ್ತದೆ ಎನ್ನುವದನ್ನು ನಿರೂಪಿಸುತ್ತಾರೆ.ಪರಮಾತ್ಮನು ಪ್ರಮಿತವಾದ ಜಗತ್ತಿನಿಂದಲೂ, ಅಪ್ರಮಿತವಾದ ಶಶವಿಷಾಣ (ಮೊಲದಕೊಂಬು)ದಿಂದಲೂ ವಿಲಕ್ಷಣನು, ಸರ್ವೋತ್ತಮನೂ ಆಗಿರುವದರಿಂದ ಅವನಿಗೆ ಪೂರ್ಣತ್ವವು ಕೂಡುತ್ತದೆ. ಹೀಗೆ ನಮಗೆ ಉಪದೇಶಕರಾದ ವೇದವ್ಯಾಸರೇ ಮೊದಲಾದವರಿಂದ ಶ್ರವಣಮಾಡಿದ್ದೇವೆ.

यद् वाचाऽनभ्युदितं येन वागभ्युद्यते ।
तदेव ब्रह्म त्वं विद्धि नेदं यदिदमुपासते ॥५॥

ಮೂರನೇ ಮಂತ್ರದಲ್ಲಿ ಪರಮಾತ್ಮನಿಗೆ ಅವಾಙ್ಮನಸಗೋಚರತ್ವವನ್ನು ಹೇಳಿರುತ್ತಾರೆ. ಅದು ಸಂಭವಿಸುವದಿಲ್ಲ. ಏಕೆಂದರೆ ಬ್ರಹ್ಮನು ವೇದವಾಗ್ಗೋಚರನಾದ ಜೀವನಿಂದ ಅಭಿನ್ನನಾಗಿರುತ್ತಾನೆ. ಜೀವನು ವೇದವಾಗ್ಗೋಚರನಾದ ಮೇಲೆ ಅವನಿಂದ ಅಭಿನ್ನನಾದ ಬ್ರಹ್ಮನೂ ವೇದವಾಗ್ಗೋಚರನಾದಂತೆಯೇ. ಹೀಗಿರುವಾಗ ಬ್ರಹ್ಮನಿಗೆ ಉಪನಿಷತ್ತು ಹೇಳಲು ಹೊರಟ ಅವಾಙ್ಮನಸಗೋಚರತ್ವವು ಹೇಗೆ ? ಎನ್ನುವ ಆಕ್ಷೇಪಕ್ಕೆ ಜೀವಬ್ರಹ್ಮರಿಗೆ ಭೇದವೇ ಇದೆ ಎನ್ನುವದನ್ನು ಇಲ್ಲಿ ನಿರೂಪಿಸುತ್ತಾರೆ.

ಯಾವ ಪರಮಾತ್ಮನನ್ನು ಸಂಪೂರ್ಣವಾಗಿ ಹೇಳುವದು ಅಸಾಧ್ಯವೋ, ಯಾರ ಪ್ರೇರಣೆಯಿಂದ ವಾಗ್ವ್ಯವಹಾರವು ಉಂಟಾಗುತ್ತದೆಯೋ ಯಾವನು ಸರ್ವದಾ ಸಮೀಪದಲ್ಲಿ ನಿಯಾಮಕನಾಗಿ ಇರುವನೋ ಅವನೇ ಬ್ರಹ್ಮನೆಂದು ತಿಳಿ. ಆ ಬ್ರಹ್ಮನಾದರೂ ಜೀವನಾಗಲು ಹೇಗೆ ಸಾಧ್ಯ ?

**यन्मनसा न मनुते येनाऽहुर्मनोमतम् ।**
**तदेव ब्रह्म त्वं विद्धि नेदं यदिदमुपासते ॥६॥**

ಯಾವ ವ್ಯಕ್ತಿಯನ್ನು ಮನಸ್ಸಿನಿಂದ ಸಂಪೂರ್ಣವಾಗಿ ತಿಳಿಯಲು ಅಸಾಧ್ಯವೋ, ಯಾವ ವ್ಯಕ್ತಿಯು ಮನಸ್ಸು ವಿಷಯೀಕರಿಸುವ ಪದಾರ್ಥಗಳನ್ನು ಪೂರ್ಣವಾಗಿ ತಿಳಿದಿದ್ದಾನೆಂದು ಜ್ಞಾನಿಗಳು ಉದ್ಗಾರಮಾಡುತ್ತಾರೆಯೋ ಅವನೇ ಪರಬ್ರಹ್ಮನೆಂದು ತಿಳಿ.

**यच्चक्षुषा न पश्यति येन चक्षूंषि पश्यति ।**
**तदेव ब्रह्म त्वं विद्धि नेदं यदिदमुपासते ॥७॥**

ಈ ಜೀವನು ಯಾವನನ್ನು ಕಣ್ಣಿನಿಂದ ನೋಡಲು ಸಮರ್ಥನಾಗಿಲ್ಲ ಯಾವನ ಪ್ರೇರಣೆಯಿಂದ(ಜೀವನು)ಬಗೆಬಗೆಯ ರೂಪಗಳನ್ನು ಕಾಣುತ್ತಾನೆ. ಅವನೇ ಬ್ರಹ್ಮ ಎಂದು ತಿಳಿ.

**यच्छ्रोत्रेण न श्रुणोति येन श्रोत्रमिदं श्रुतम् ।**
**तदेव ब्रह्म त्वं विद्धि नेदं यदिदमुपास ते ॥८॥**

ಯಾವ ವ್ಯಕ್ತಿಯನ್ನು (ಜೀವನು)ಕಿವಿಯಿಂದ ಕೇಳಲು ಸಮರ್ಥನಾಗಿಲ್ಲ ಯಾವನಿಂದ ಶ್ರೋತ್ರೇಂದ್ರಿಯವು ಕೇಳಲು ಶಕ್ತಿಯನ್ನು ಪಡೆದಿದೆಯೋ ಅವನೇ ಬ್ರಹ್ಮನೆಂದು ತಿಳಿ.

**यत् प्राणेन न प्राणिति येन प्राणः प्रणीयते ।**
**तदेव ब्रह्म त्वं विद्धि नेदं यदिदमुपास ते ॥९॥**

ಯಾವನು ಮುಖ್ಯಪ್ರಾಣನಿಂದ ಚಲಿಸದೇ ಯಾವನ ಪ್ರೇರಣೆಯಿಂದಲೇ ಮುಖ್ಯಪ್ರಾಣನು ಚಲಿಸುವನೋ ಅವನೇ ಪರಬ್ರಹ್ಮನೆಂದು ತಿಳಿ. ಈ ಜೀವಸ್ವರೂಪವು ಬ್ರಹ್ಮವಲ್ಲ. ನಿನ್ನ ಸಮೀಪದಲ್ಲಿ ನಿಯಾಮಕನಾಗಿರುವವನೇ ಬ್ರಹ್ಮ

**ನೇದಂ ಯದಿದಮುಪಾಸತೇ**

ನಿನ್ನ ಬಳಿ ಅಂತರ್ಯಾಮಿಯಾಗಿರುವವನೇ ಬ್ರಹ್ಮನೆಂದು ತಿಳಿ. ಮತ್ತೇ ಕೆಲವರು ಉಪಾಸನೆಮಾಡುವಂತೆ ಈ ಜೀವ-ಜಡಾತ್ಮಕವಾದ ಜಗತ್ತು ಬ್ರಹ್ಮವಲ್ಲ ಉಪ -ಆಸ -ತೇ ದೇಹಾದಿಗಳಿಗಿಂತ ವಿಭಿನ್ನನಾದ ಜೀವನೊಬ್ಬ ಇರುವಂತೆ ಜೀವನಿಗಿಂತಲೂ ವಿಲಕ್ಷಣನಾಗಿ ಜೀವನ ಜೊತೆಗೆ ಇದ್ದು ನಿಯಾಮಕನಾಗಿರುವವನು ಪರಮಾತ್ಮ. ನೇದಂ ಈ ಜೀವನೇ

ಭಗವಂತನಲ್ಲ. ತೇ=ನಿನ್ನ ಉಪ=ಸಮೀಪದಲ್ಲಿ ಆಸ=ನಿಯಾಮಕನಾಗಿರುವವನೇ ಪರಮಾತ್ಮ ಇಲ್ಲಿ ವಾದಿರಾಜರು ಇನ್ನೊಂದು ಸ್ವಾರಸ್ಯವನ್ನು ಹೀಗೆ ತೋರಿಸಿರುತ್ತಾರೆ. ತೇ=ನಿನ್ನ ಉಪ=ಸಮೀಪದಲ್ಲಿ ಅಂದರೆ ಹೃದಯದಲ್ಲಿ ನಿಯಾಮಕತಯಾ ಇದ್ದದ್ದು ಎಂದು ಅರ್ಥ ಬರೆದು ಮತ್ತೆ ಪ್ರಶ್ನೆ ಮಾಡಿಕೊಳ್ಳುತ್ತಾರೆ ಸಕಲ ಜೀವರಾಶಿಗಳ ಹೃದಯ ಗುಹಾದಲ್ಲಿ ಆಕಾಶವೂ ಇದೆ. ಆ ಆಕಾಶವಾದರೂ ಜಡ. ಅದಕ್ಕೆ ಬ್ರಹ್ಮತ್ವವು ಕೂಡುವದಿಲ್ಲವಲ್ಲ ಎನ್ನುವ ಶಂಕೆಗೆ 'ತೇ ವಿನಿಯಾಮಕಮ್' ಎನ್ನುವ ಭಾಷ್ಯದ ಮಾತಿನಿಂದ ಉತ್ತರ ನೀಡುತ್ತಾರೆ. ಹೃದಯದಲ್ಲಿ ಆಕಾಶ ಇದ್ದರೂ ಅದು ನಿಯಾಮಕವಾಗಿ ಇದ್ದದ್ದಲ್ಲ ಅನ್ನುವದಕ್ಕಾಗಿ ಅದನ್ನು ಸ್ವೀಕರಿಸಬಾರದು. ಎನ್ನುವದು ಕವಿಗಳ ಹೃದಯ.

## ಅಥ ದ್ವಿತೀಯಖಂಡಃ

ಪ್ರಥಮಖಂಡದಲ್ಲಿ ಯಾರೂ ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿಯಲು ಸಮರ್ಥರಲ್ಲ ಎಂದು ತಿಳಿಸಿ ಚತುರ್ಮುಖಬ್ರಹ್ಮದೇವರು ಅದನ್ನೇ ಮತ್ತೆ ವಿವರಿಸುತ್ತಿದ್ದಾರೆ.

**यदि मन्यसे सुवेदेति दहरमेवापि नूनं त्वं वेत्थ ब्रह्मणो रुपम् ।**
**यदस्य त्वं यदस्य देवेष्वथ नु मीमांस्यमेव ते ॥१॥**

ಮಹೇಶ್ವರನೇ ! ಪರಮಾತ್ಮನನ್ನು ನಾನು ಚೆನ್ನಾಗಿ (ಸಂಪೂರ್ಣವಾಗಿ) ತಿಳಿದಿರುವೆ ಎಂದು ನೀನು ತಿಳಿದುಕೊಂಡಿದ್ದರೆ ಆ ಬ್ರಹ್ಮನ ಸ್ವರೂಪವನ್ನು ನೀನು ಚೆನ್ನಾಗಿ ತಿಳಿದಿಲ್ಲ ಎಂದೇ ಅರ್ಥ. ಆದ್ದರಿಂದ ನೀನು ಎಲ್ಲೆಡೆ ಇರುವ ಪರಮಾತ್ಮನನ್ನು ಚೆನ್ನಾಗಿ ವಿಚಾರ ಮಾಡು.

ನಾವು ಭಗವಂತನನ್ನು ಸಂಪೂರ್ಣವಾಗಿ ತಿಳಿಯದಿದ್ದರೂ ಬ್ರಹ್ಮಪದವಿಯಲ್ಲಿರುವ ನೀವು ಚೆನ್ನಾಗಿ ತಿಳಿದಿರುತ್ತೀರಿ ಎನ್ನುವ ರುದ್ರದೇವರ ಮಾತಿಗೆ ಬ್ರಹ್ಮದೇವರೇ ಸಮಾಧಾನ ನೀಡುತ್ತಾರೆ

**मन्ये विदितं नाहमन्ये सुवेदेति नो न वेदेति वेद च ।**
**योनस्तद् वेद तद् वेद नो न वेदेति वेद च ॥२॥**

ನಾನಾದರೋ ಬ್ರಹ್ಮನನ್ನು ಸಂಪೂರ್ಣವಾಗಿ ತಿಳಿದಿದ್ದೇನೆ ಎಂದು ನನ್ನನ್ನು ತಿಳಿದುಕೊಂಡಿಲ್ಲ. ಅನ್ನುವ ಮಾತ್ರಕ್ಕೆ ಸಲ್ಪವೂ ತಿಳಿದಿಲ್ಲ ಎನ್ನುವದೂ ಅಲ್ಲ. ಸಲ್ಪ ತಿಳಿದುಕೊಂಡಿರುತ್ತೇನೆ.

ಯಾವನು ಪರಮಾತ್ಮನನ್ನು ಚೆನ್ನಾಗಿ ತಿಳಿದಿರುತ್ತೇನೆ ಎಂದು ಹೇಳಿಕೊಳ್ಳುತ್ತಾನೆಯೋ ಅವನು ಪರಮಾತ್ಮನನ್ನು ಚೆನ್ನಾಗಿ ತಿಳಿದಿಲ್ಲ ಎಂದೇ ಹೇಳಬೇಕು. ಯಾಕೆಂದರೆ ಅಪರಿಚ್ಛಿನ್ನನಾದ ಪರಮಾತ್ಮನನ್ನು ಪರಿಚ್ಛಿನ್ನನೆಂದು ತಿಳಿದಿರುತ್ತಾನೆ. ಯಾವನಿಗೆ ಪರಮಾತ್ಮನ ಅಪರಿಚ್ಛಿನ್ನತ್ವದ (ಅನಂತತ್ವದ) ಜ್ಞಾನವಿದೆಯೋ ಅವನು ಜ್ಞಾನಿ ಎಂದು ತಿಳಿ.

यस्यामतं तस्य मतं मतं यस्य न वेद सः ।
अविज्ञातं विजानतां विज्ञातमविजानताम् ।।३।।

ಯಾವನು ಬ್ರಹ್ಮನನ್ನು ಸಂಪೂರ್ಣವಾಗಿ ಮನನ ಮಾಡಿಲ್ಲ ಎಂದು ತಿಳಿದಿರುವನೋ ಅವನು ಬ್ರಹ್ಮನ ಅನಂತತ್ವವನ್ನು ತಿಳಿದವನು. ಅನ್ನುವದಕ್ಕೆ ಅವನನ್ನು ಬ್ರಹ್ಮನ ಮನನಮಾಡಿದವನು ಎಂದು ತಿಳಿ. ಮತ್ತೇ ಯಾವನು ಬ್ರಹ್ಮನನ್ನು ನಾನು ಚೆನ್ನಾಗಿ ಮನನ ಮಾಡಿದವನು ಎಂದು ತಿಳಿದಿರುತ್ತಾನ್ನೋ ಅವನು ಬ್ರಹ್ಮನ ಸಾಂತತ್ವವನ್ನು ತಿಳಿದವನು ಅನ್ನುವದಕ್ಕಾಗಿ ಅವನು ಬ್ರಹ್ಮನ ಮನನ ಮಾಡದವನು ಎಂದು ತಿಳಿ.

ಯಾವ ಪುರುಷನು ನಾನು ಪರಮಾತ್ಮನನ್ನು ಚೆನ್ನಾಗಿ ಸಾಕ್ಷಾತ್ಕಾರಮಾಡಿಕೊಂಡಿರುವವನು ಎಂದು ತಿಳಿದುಕೊಳ್ಳದೇ ನಾನು ಇನ್ನೂ ತಿಳಿಯುವದಿದೆ ಎಂದು ಭಾವಿಸುತ್ತಾನೆ ಅವನು ಜ್ಞಾನಿಯೆನಿಸಿಕೊಳ್ಳುತ್ತಾನೆ. ಸ್ವಲ್ಪ ತಿಳಿದುಕೊಂಡು ನಾನು ಜ್ಞಾನಿ ಎಂದು ಹೇಳಿಕೊಳ್ಳುವವನು ಅಜ್ಞಾನಿ ಎನಿಸುತ್ತಾನೆ.

ಪರಬ್ರಹ್ಮನ ಸಾಕ್ಷಾತ್ಕಾರವು ಸಂಪೂರ್ಣವಾಗಿ ಆಗುವದಿಲ್ಲ ಎಂಬುದನ್ನು ಇಲ್ಲಿ ತಿಳಿಸುತ್ತಾರೆ.

प्रतिबोधविदितं मतममृतत्वं हि विन्दते ।
आत्मना विन्दते वीर्यं विद्यया विन्दतेऽमृतम् ।४।।

ಪಶುಪತಿಯೇ ! ಪುರುಷರಿಗೆ ಬ್ರಹ್ಮನ ಪರೋಕ್ಷಜ್ಞಾನವು ಹೇಗೆ ಸಂಪೂರ್ಣವಾಗಿ ಆಗುವದಿಲ್ಲವೋ ಹಾಗೆಯೇ ಭಗವಂತನ ಸಾಕ್ಷಾತ್ಕಾರವೂ ಪೂರ್ಣವಾಗಿ ಆಗಲಾರದು.

ಮೋಕ್ಷವನ್ನು ಬಯಸುವ ಪುರುಷನು ಸದ್ಗುರೂಪದೇಶವನ್ನು ಪಡೆದು ತನ್ನ ಯೋಗ್ಯತಾನುಸಾರ ಶ್ರವಣಮನನಾದಿಗಳಿಂದ ಪರಮಾತ್ಮನ ಅಪರೋಕ್ಷಜ್ಞಾನವನ್ನು ಹೊಂದುವನು. ಅಪರೋಕ್ಷಜ್ಞಾನವನ್ನು ಪಡೆದ ಮೇಲೆ ಯಜ್ಞಾದಿಸತ್ಕರ್ಮಗಳಲ್ಲಿ ಪ್ರಯತ್ನಮಾಡಿ ಭಗವದಾರಾಧನೆಯನ್ನು ಮಾಡುತ್ತಾ ಮೋಕ್ಷದಲ್ಲಿ ಆನಂದಾಭಿವೃದ್ಧಿಯನ್ನು ಪಡೆದುಕೊಳ್ಳುತ್ತಾನೆ.

ಮೋಕ್ಷರೂಪವಾದ ಇಷ್ಟಾರ್ಥವನ್ನು ಕೊಡುವ ಬ್ರಹ್ಮಜ್ಞಾನವನ್ನು ಯಾವಾಗ ಸಂಪಾದಿಸಬೇಕು ? ಎನ್ನುವದನ್ನು ತಿಳಿಸುತ್ತಾರೆ.

इह चेदवेदीदथ सत्यमस्ति न चेदिहावेदीन्महती विनष्टिः ।
भूतेषु भूतेषु विचिन्त्य धीराः प्रेत्यास्माल्लोकादमृता भवन्ति
।।५।।

ಭಗವದಾರಾಧನಾದಿಗಳನ್ನು ಮಾಡುವದಕ್ಕೆ ಯೋಗ್ಯವಾದ ಬ್ರಾಹ್ಮಣಾದಿದೇಹಗಳನ್ನು ಪಡೆದು ಯಾರು ಶ್ರವಣಮನನಾದಿಗಳಿಂದ ಭಗವದಾರಾಧನೆಯನ್ನು ಮಾಡುತ್ತಾರೆಯೋ ಅವರು ಸುಖವನ್ನು ಹೊಂದುತ್ತಾರೆ. ಯಾರು ಬ್ರಾಹ್ಮಣಾದಿದೇಹಗಳನ್ನು ಪಡೆದೂ ಭಗವದಾರಾಧನೆಯನ್ನು ಮಾಡುವದಿಲ್ಲ ಅವರು ಮಹಾದುಃಖವನ್ನು ಹೊಂದುತ್ತಾರೆ. ಆದ್ದರಿಂದ ಜ್ಞಾನಿಯಾದವನು 'ಯಾವಾಗಲೂ ಎಲ್ಲೆಡೆಯೂ ಪರಮಾತ್ಮನಿರುವನು' ಎಂದು ತಿಳಿದು ಉಪಾಸನೆಯನ್ನು ಮಾಡುತ್ತಾ ಲಿಂಗದೇಹವನ್ನು ಕಳೆದುಕೊಂಡು ಮುಕ್ತನಾಗುತ್ತಾನೆ.

### ಅಥ ತೃತೀಯಖಂಡಃ

ಪೂರ್ವಖಂಡದಲ್ಲಿ ಪರಬ್ರಹ್ಮನು ಲೋಕವಿಲಕ್ಷಣನಾದುದರಿಂದ ಸಂಪೂರ್ಣವಾಗಿ ತಿಳಿಯಲು ಅಸಾಧ್ಯನೆಂದು ನಿರೂಪಿಸಿ ಆ ವಿಷಯದಲ್ಲಿಯೇ ಸಂವಾದಿಯಾದ ಕಥೆಯೊಂದನ್ನು ಬ್ರಹ್ಮದೇವರು ಹೇಳುತ್ತಾರೆ.

**ब्रह्म ह देवेभ्यो विजिग्ये । तस्य ह ब्रह्मणो विजये देवा अमहीयन्त । त ऐक्षन्त । अस्माकमेवायं विजयः अस्माकमेवायं महिमेति । तद्धैषां विजज्ञौ ॥१॥**

ಪೂರ್ವದಲ್ಲಿ ದೇವತೆಗಳಿಗೂ ಅಸುರರಿಗೂ ಘೋರವಾದ ಯುದ್ಧ ಉಂಟಾಗಲು ಪರಮಾತ್ಮನು ದೇವತೆಗಳಿಗೆ ಅನುಗ್ರಹವನ್ನು ಮಾಡುವದಕ್ಕಾಗಿ ಅಸುರರನ್ನೆಲ್ಲಾ ಜಯಿಸಿ ದೇವತೆಗಳಿಗೆ ಜಯವನ್ನು ದಯಪಾಲಿಸಿದ. ದೇವತೆಗಳು ಅಸುರಾವೇಶದಿಂದ ನಾವೇ ಜಯಿಸಿದೆವು. ಈ ಶತ್ರುನಿಗ್ರಹದಿಂದ ಉಂಟಾದ ಮಹಿಮೆಯು ನಮ್ಮದೇ ಎಂದು ಅಹಂಕಾರದಿಂದ ಬೀಗಿದರು. ಇದನ್ನು ಪರಮಾತ್ಮ ಅರಿತನು.

**तेभ्यो ह प्रादुर्बभूव । तन्न व्यजानत । किमिदं यक्षमिति ॥२॥ तेऽग्निमब्रुवन् । जातवेद एतद् विजानीहि किमेतद्यक्षमिति तथेति ॥३॥ तदभ्यद्रवत् । तमभ्यवदत् कोऽसीति । अग्निर्वा अहमस्मीत्यब्रवीज्जातवेदा वा अहमस्मीति ॥४॥ तस्मिंस्त्वयि किं वीर्यमित्यपि इदं सर्वं दहेयं यदिदं पृथिव्यामिति ॥५॥ तस्मै तृणं निदधावेतद् दहेति । तदुप्रेयाय सर्वजवेन । तन्न शशाक दग्धुम् । स तत एव निववृते । नैतदशकं विज्ञातुं यदेतद् यक्षमिति ॥६॥**

ದೇವತೆಗಳು ಅಸುರಾವೇಶದಿಂದ ಗರ್ವಿತರಾಗಿರಲು ಇವರ ಗರ್ವವನ್ನು ಹೋಗಲಾಡಿಸಲು ಪರಮಾತ್ಮನು ಯಕ್ಷರೂಪನಾಗಿ ಅವರೆದುರಿಗೆ ಪ್ರತ್ಯಕ್ಷನಾಗುತ್ತಾನೆ. ದೇವತೆಗಳು ಆಶ್ಚರ್ಯರೂಪನಾದ ಯಕ್ಷನನ್ನು ನೋಡಿ ಇವನಾರು ? ಇವನ ಸ್ವರೂಪವನ್ನು ತಿಳಿಯಬೇಕೆಂದು ಬಯಸಿ ಅಗ್ನಿಯನ್ನು ಕರೆದು 'ಇವನಾರು ಎಂದು ತಿಳಿದು ಬಾ' ಎಂದು ಹೇಳುತ್ತಾರೆ. ಅಗ್ನಿಯು ಯಕ್ಷರೂಪಿಯಾದ ಪರಮಾತ್ಮನ ಎದುರಿಗೆ ಹೋಗಲು ಸರ್ವಜ್ಞನಾದ ಪರಮಾತ್ಮನು ಅಗ್ನಿಯನ್ನು 'ನೀನು ಯಾರು' ಎಂದು ಪ್ರಶ್ನೆ ಮಾಡಿದ. ಅಗ್ನಿಯು 'ನಾನು ಅಗ್ನಿ ಮತ್ತು ಜಾತವೇದ ಎನ್ನುವ ಹೆಸರುಗಳಿಂದ ಲೋಕಪ್ರಸಿದ್ಧನಾದವನು.' ಎಂದು ಹೇಳಿದ. ಅಗ್ನಿಯ ಅಹಂಕಾರವನ್ನು ಖಂಡಿಸಲು 'ನಿನ್ನಲ್ಲಿ ಏನು ಶಕ್ತಿ ಇರುವದು' ? ಎಂದು ಯಕ್ಷನು ಪ್ರಶ್ನೆಮಾಡಿದನು. ಲೋಕಗಳಲ್ಲಿರುವ ಎಲ್ಲ ವಸ್ತುಗಳನ್ನು ಕ್ಷಣಮಾತ್ರದಲ್ಲಿ ದಹಿಸುವ ಶಕ್ತಿ ನನಗುಂಟು ಎಂದನು ಅಗ್ನಿ. ಆದಕ್ಕೆ ಯಕ್ಷನು ಒಂದು ಹುಲ್ಲು ಕಡ್ಡಿಯನ್ನು ಇಟ್ಟು ಇದನ್ನು ಸುಡು. ಎಂದ. ಕೂಡಲೇ ಅಗ್ನಿಯು ಅತಿವೇಗದಿಂದ ಅದರ ಸಮೀಪಕ್ಕೆ ಹೋಗಿ ಬಹುಪ್ರಯಾಸದಿಂದ ಸುಡಲು ಪ್ರಯತ್ನಿಸಿ ಸುಡಲಾಗದೇ ಸೋತು ನಿಂತನು. ಬಹು ಲಜ್ಜೆಯಿಂದ ಭಗವಂತನಿಗೆ ಮುಖತೋರಿಸದೇ ದೇವತೆಗಳೆಡೆಗೆ ಓಡಿದ. ''ನಾನು ಆ ಯಕ್ಷನನ್ನು ತಿಳಿಯಲು ಅಸಮರ್ಥನು'' ಎಂದು ನುಡಿದನು.

अथ वायुमब्रुवन् । वायवेतद् विजानीहि किमेतद्यक्ष-मिति । तथेति ॥७॥ तदभ्यद्रवत् । तमभ्यवदत् कोऽसीति । वायुर्वा अहमस्मीत्यब्रवीत् मातरिश्वा वा अहमस्मीति ॥८॥ तस्मिंस्त्वयि किं वीर्यमित्यपि । इदं सर्वमाददीयं यदिदं पृथिव्यामिति ॥९॥ तस्मै तृणं निदधावेतदादत्स्वेति । तदुपप्रेयाय सर्वजवेन । तन्न शशाकाऽदातुम् । स तत एव निववृते । नैतदशकं विज्ञातुं यदेतद् यक्षमिति ॥१०॥ अथेन्द्रमब्रुवन् । मघवन्नेतद् विजानीहि किमेतद् यक्षमिति । तथेति तदभ्यद्रवत् । तस्मात् तिरोदधे । स तस्मिन्नेवाकाशे स्त्रियमाजगाम बहुशोभमानामुमां हैमवतीम् । तां होवाच किमेतद् यक्षमिति ॥१२॥

ದೇವತೆಗಳು ವಾಯುವನ್ನು ಕರೆದು 'ಇವನಾರು ಎಂದು ತಿಳಿದು ಬಾ' ಎಂದು ಹೇಳಿದರು. ವಾಯುವು ಆ ಯಕ್ಷನ ಎದುರಿಗೆ ಹೋಗಲು ಸರ್ವಜ್ಞನಾದ ಪರಮಾತ್ಮನು

'ನೀನು ಯಾರೆಂದು ಪ್ರಶ್ನೆಮಾಡಿದನು.' ವಾಯುವು ನಾನು ಮಾತರಿಶ್ವಾ ವಾಯು ಎಂಬ ಹೆಸರುಗಳಿಂದ ಲೋಕಪ್ರಸಿದ್ಧನಾದವನು. ಎಂದು ಹೇಳಿದನು. ಆ ವಾಯುವಿನ ಅಹಂಕಾರ ಖಂಡನೆಗಾಗಿ ಯಕ್ಷನು 'ನಿನ್ನಲ್ಲಿ ಏನು ಶಕ್ತಿಯಿದೆ ?' ಎಂದು ಪ್ರಶ್ನಿಸಿದನು. ವಾಯು ಜಗತ್ತಿನಲ್ಲಿರುವ ಎಲ್ಲ ವಸ್ತುಗಳನ್ನು ಕ್ಷಣಾರ್ಧದಲ್ಲಿ ಹಾರಿಸಬಲ್ಲೆ ಎಂದ. ಅದಕ್ಕೆ ಯಕ್ಷನು ಒಂದು ಹುಲ್ಲುಕಡ್ಡಿಯನ್ನು ತೋರಿಸಿ ಇದನ್ನು ಹಾರಿಸು ಎಂದು ನುಡಿದ. ವಾಯುವು ಅತಿ ವೇಗದಿಂದ ಅದರ ಸಮೀಪಕ್ಕೆ ಹೋಗಿ ಬಹು ಪ್ರಯಾಸದಿಂದ ಹಾರಿಸಲು ಪ್ರಯತ್ನಿಸಿದ. ಹುಲ್ಲುಕಡ್ಡಿಮಾತ್ರ ಸ್ವಲ್ಪವೂ ಆಚೆ ಈಚೆ ಕದಲಲಿಲ್ಲ. ಬಹಳ ನಾಚಿಕೆಯಿಂದ ಭಗವಂತನಿಗೆ (ಯಕ್ಷನಿಗೆ)ಮುಖವನ್ನೇ ತೋರಿಸದೇ ದೇವತೆಗಳೆಡೆಗೆ ಓಡಿದ. ನಾನು ಆ ಯಕ್ಷನನ್ನು ತಿಳಿಯಲು ಅಸಮರ್ಥನು ಎಂದು ದೇವತೆಗಳ ಸಮ್ಮುಖದಲ್ಲಿ ಪ್ರತಿವಚನ ನೀಡಿದ.

ದೇವತೆಗಳು ಯಕ್ಷರೂಪಿಯಾದ ಭಗವಂತನನ್ನು ತಿಳಿದು ಕೊಳ್ಳುವದಕ್ಕಾಗಿ ಇಂದ್ರನನ್ನು ಕಳುಹಿಸಿದರು. ಇಂದ್ರನು ನನ್ನಿಂದ ಸಾಕ್ಷಾತ್ ಉಪದೇಶಪಡೆಯಲು ಅನರ್ಹನು ಎಂದು ಯೋಚಿಸಿ ಇವನಿಗೆ ತತ್ತ್ವೋಪದೇಶ ಮಾಡು ಎಂದು ಪಾರ್ವತಿದೇವಿಗೆ ಹೇಳಿ ಅಂತರ್ಧಾನನಾದನು. ನಂತರ ಇಂದ್ರನು ಇದೀಗ ಅಂತರ್ಧಾನನಾದವನು ಯಾರು ಎಂದು ಉಮೆಗೆ ಪ್ರಶ್ನಿಸಿದನು. ಯಕ್ಷರೂಪಿಯಾದ ಭಗವಂತನಿಂದ ಆಜ್ಞಪ್ತಳಾದ ಪಾರ್ವತಿಯು ಇಂದ್ರನಿಗೆ ಉಪದೇಶಿಸುತ್ತಾಳೆ.

## ಅಥ ಚತುರ್ಥಖಂಡಃ

**ब्रह्मेति होवाच । ब्रह्मणो वा एतद् विजयेऽमहीयध्व-**
**मिति । ततो हैव विदाञ्चकार ब्रह्मेति ॥१॥**

ಆ ಯಕ್ಷರೂಪದಲ್ಲಿ ಬಂದವನು ಪರಬ್ರಹ್ಮನೇ. ನೀವು ಸಾಧಿಸದ ವಿಜಯವನ್ನು ನಿಮ್ಮದೆಂದು ಭಾವಿಸಿ ಅಹಂಕಾರಕ್ಕೊಳಗಾಗಿರುವಿರಿ ಎಂದಳು ಪಾರ್ವತಿ. ಅವಳ ಉಪದೇಶದಿಂದ ಇಂದ್ರನು ಯಕ್ಷರೂಪದಿಂದ ಬಂದವನು ಭಗವಂತನೇ. ನಾವು ವಿಜಯವನ್ನು ಪಡೆದದ್ದು ಈ ಭಗವಂತನಿಂದಲೇ ಎಂದು ತಿಳಿದನು.

**तस्माद् वा एते देवा अतितरामिवान्यान् देवान्**
**यदग्निर्वायुरिन्द्रस्ते ह्येनन्नेदिष्ठं पस्पृशुः । ते ह्येनत् प्रथमो**
**विदाञ्चकार ब्रह्मेति ॥२॥ तस्मात् वा इन्द्रोऽतितरा-**
**मिवान्यान् देवान् । स ह्येनन्नेदिष्ठं पस्पर्श । स ह्येनत्**
**प्रथमो विदाञ्चकार ब्रह्मेति ॥३॥**

ಸಪತ್ನೀಕರಾದ ಬ್ರಹ್ಮ-ವಾಯು-ಶಿವಮೊದಲಾದವರು ಗರ್ವರಹಿತರಾದ ಪ್ರಯುಕ್ತ ಇತರದೇವತೆಗಳಿಗಿಂತ ಅಧಿಕರೆನಿಸಿದರು. ಅಗ್ನಿ-ನಾಸಿಕ್ಯವಾಯು ಹಾಗೂ ಇಂದ್ರ ಈ ಮೂವರು ಯಕ್ಷರೂಪದಲ್ಲಿರುವ ಭಗವಂತನನ್ನು ಮೊದಲು ಕಂಡದ್ದರಿಂದ ಉಳಿದ ದೇವತೆಗಳಿಗಿಂತ ಉತ್ತಮರೆನಿಸಿದರು. ಮತ್ತೇ ಈ ಮೂವರಲ್ಲಿ ಇಂದ್ರನು ಪಾರ್ವತಿಯ ಉಪದೇಶದಿಂದಲೂ ಅಗ್ನಿ ಮತ್ತು ನಾಸಿಕ್ಯವಾಯು ಇಂದ್ರನ ಉಪದೇಶದಿಂದಲೂ ಭಗವಂತನನ್ನು ತಿಳಿದಿರುವದರಿಂದ ಇಂದ್ರನು ಅಗ್ನಿವಾಯುಗಳಿಗಿಂತಲೂ ಉತ್ತಮನೆನಿಸಿದನು.

ಯಕ್ಷರೂಪಿಯಾದ ಭಗವಂತನಿಂದ ನಿಯಮ್ಯಳಾದ ಪಾರ್ವತಿಯು ಇಂದ್ರನಿಗೆ ಉಪದೇಶಿಸುತ್ತಾಳೆ.

**तस्यैष आदेशो यदेतद् विद्युतोऽभिव्यद्युतदा३ इति ।**
**न्यमीमिषदा३ इत्यधिदैवतम् ॥४॥ अथाध्यात्मम् ।**
**यदेतद् गच्छतीव च मनोऽनेन वै तदुपस्मरत्यभीक्ष्णं**
**सङ्कल्पस्तद्ध तद्वनंनाम तद्वनमित्युपासितव्यम् ॥५॥**

ಉಪಾಸನಾರ್ಹವಾದ ಭಗವಂತನ ಎರಡು ರೂಪಗಳೆಂದರೆ ಅಧಿದೈವ ಹಾಗೂ ಅಧ್ಯಾತ್ಮ. ಇದರಲ್ಲಿ ಮೊದಲನೇಯದಾದ ಅಧಿದೈವ ಎಂಬುವದು ಸರ್ವತ್ರವ್ಯಾಪ್ತವಾಗಿ ವಿದ್ಯುದಾದಿತೇಜೋಮಯವಾದ ಅರ್ಥವನ್ನು ಪ್ರಕಾಶಿಸುತ್ತದೆ. ಈ ಪರಿಪೂರ್ಣವಾದ ಬ್ರಹ್ಮರೂಪವು ಪ್ರಳಯಕಾಲದಲ್ಲಿ ಕಣ್ಣುಗಳನ್ನು ಮುಚ್ಚಿದಂತೆ ನಟನೆ ಮಾಡಿ ಕ್ಷೀರಸಾಗರದಲ್ಲಿ ಪವಡಿಸಿರುತ್ತದೆ. ನಾನಾಬಗೆಯ ಪದಾರ್ಥಗಳನ್ನು ಬಯಸುವ ಮನಸ್ಸು ದೇಹಾಂತರ್ಗತ-ವಾದ ಅನಿರುದ್ಧಾಖ್ಯಭಗವದ್ರೂಪದಿಂದ ಪ್ರೇರಿತವಾಗಿದ್ದರೂ ಸಂಪೂರ್ಣವಾಗಿ ವಿಷ್ಣುಮೊದಲಾದವರನ್ನು ತಿಳಿಯುವದಿಲ್ಲ. ಈ ಮನಸ್ಸೇ ದೇಹಾಂತರ್ಯಾಮಿಯಾದ ಅನಿರುದ್ಧರೂಪಿಪರಮಾತ್ಮನಿಂದ ಪ್ರೇರಿತವಾಗಿ ವಿಷ್ಣುಮೊದಲಾದವರನ್ನು ಸ್ಮರಿಸುತ್ತದೆ. ಈವಿಷ್ಣುವು ಸರ್ವತ್ರವ್ಯಾಪ್ತನಾದ್ದರಿಂದ 'ತತ್' ಎಂಬುದಾಗಿಯೂ ಸರ್ವರಿಂದ ಭಜನೀಯನಾದ್ದರಿಂದ 'ವನ' ಎಂಬುದಾಗಿಯೂ ನಾಮವನ್ನು ಪಡೆದುಕೊಂಡಿರುತ್ತಾನೆ.

स य एतदेवं वेदाभि हैनं सर्वाणि भूतानि संवाञ्छन्ति
॥६॥ उपनिषदं भो ब्रूहीति । उक्ता त उपनिषत् ।
ब्राह्मीं वा व त उपनिषदमब्रूमेति । तस्यै तपो दमः
कर्मेति प्रतिष्ठा । वेदाः सर्वाङ्गानि सत्यमायतनम् । यो
वा एतामेव वेदापहत्य पाप्मानमनन्ते स्वर्गे लोके ज्येये
प्रतितिष्ठति प्रतितिष्ठति ॥७॥

ಪೂರ್ವಮಂತ್ರದಲ್ಲಿ ಬ್ರಹ್ಮಸ್ವರೂಪವನ್ನು ಎರಡು ಕಾರಣಗಳಿಂದ ತತ್‌ಎಂದು ವನ ಎಂದು ಉಪಾಸನೆ ಮಾಡಬೇಕು ಎಂದು ಹೇಳಿರುತ್ತಾರೆ. ಯಾರು ಪೂರ್ವದಲ್ಲಿ ಹೇಳಿದಂತೆ ಉಪಾಸನೆಯನ್ನು ಮಾಡುತ್ತಾರೆಯೋ ಅವರಿಗೆ ಈ ಶ್ಲೋಕದಲ್ಲಿ ಫಲವನ್ನು ಹೇಳಿರುತ್ತಾರೆ. ಯಾವನು ಹೀಗೆ ಭಗವಂತನನ್ನು ಚೆನ್ನಾಗಿ ತಿಳಿಯುತ್ತಾನೆಯೋ ಅವನು ಸರ್ವರಿಗೂ ಬೇಕಾದವನಾಗುತ್ತಾನೆ. ಆದ್ದರಿಂದ ಈ ಉಪಾಸನೆಯು ಆವಶ್ಯಕವೆಂದು ಬ್ರಹ್ಮದೇವರು ಹೇಳಲು ಉಮಾಪತಿಯು ಆ ಉಪನಿಷತ್ತಿನ ಸ್ವರೂಪವನ್ನು ಹೇಳು ಎಂದು ಕೇಳಿದಾಗ ಬ್ರಹ್ಮದೇವರು ಪ್ರತಿವಚನ ನೀಡುತ್ತಾರೆ. ಎಲೈ ರುದ್ರನೇ ನೀನು ಉಪನಿಷತ್ಪ್ರತಿಪಾದ್ಯ ಸ್ವರೂಪವನ್ನು ಕೇಳುತ್ತಿಯೋ ಅಥವಾ ಉಪನಿಷತ್ತಿನಿಂದ ಹುಟ್ಟಿದ ಜ್ಞಾನವು ಉಳಿಯುವದು ಹೇಗೆ ಎಂದು ಕೇಳುತ್ತೀಯೋ ಅಥವಾ ಜ್ಞಾನಕ್ಕೆ ಕಾರಣವೇನೆಂದು ಕೇಳುತ್ತೀಯೋ ಎಂಬ ಮೂರು ಪ್ರಶ್ನೆಗಳನ್ನು ಮಾಡಿ ಮೂರಕ್ಕೂ ಸಮಾಧಾನವನ್ನು ಹೇಳಿರುತ್ತಾರೆ. ಉಪನಿಷತ್ಪ್ರತಿಪಾದ್ಯ ಸ್ವರೂಪವನ್ನು ಕೇಳುವದಾದರೆ ಅದನ್ನು ಈಗಾಗಲೇ ಹೇಳಿ ಮುಗಿಸಿದ್ದೇನೆ. ಉಪನಿಷತ್ತಿನಿಂದ ಹುಟ್ಟಿದ ಜ್ಞಾನವು ಉಳಿಯಬೇಕಾದರೆ ತಪಸ್ಸು ಇಂದ್ರಿಯನಿಗ್ರಹ, ನಿಷ್ಕಾಮಕರ್ಮ, ಈ ಮೂರು ಆವಶ್ಯಕ. ಈ ಮೂರು ಯಾರಲ್ಲಿ ಇರುವವೋ ಅವರಲ್ಲಿ ಉಪನಿಷತ್ತಿನ ಜ್ಞಾನವು ಸ್ಥಿರವಾಗಿ ಉಳಿಯುತ್ತದೆ. ಭಗವತ್ತತ್ತ್ವಜ್ಞಾನಕ್ಕೆ ಋಗಾದಿಚತುರ್ವೇದಗಳು, ಶಿಕ್ಷಾದಿಷಡಂಗಗಳು, ಬ್ರಹ್ಮಮೀಮಾಂಸಾಶಾಸ್ತ್ರವು ಸಾಧನವಾಗಿರುತ್ತವೆ. ಹೀಗೆ ಬ್ರಹ್ಮದೇವರು ರುದ್ರದೇವರು ಕೇಳಿದ ಮೂರು ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರಿಸಿದ್ದಾರೆ.

ಈ ಉಪನಿಷತ್ತಿನ ಅರ್ಥವನ್ನು ಯಾರು ತಿಳಿಯುತ್ತಾರೆ ಅವರು ಸರ್ವಪಾಪಗಳನ್ನು ಕಳೆದುಕೊಂಡು ತೇಜೋಮಯನೂ, ಸರ್ವೋತ್ತಮನೂ, ಜ್ಞಾನಾನಂದಾದಿಸ್ವರೂಪನೂ, ದೇಶತಃ ಕಾಲತಃ ಅಪರಿಚ್ಛಿನ್ನನೂ, ಗುಣಪೂರ್ಣನೂ ಆದ ಭಗವಂತನ ಸಾಯುಜ್ಯವನ್ನು ಪಡೆಯುತ್ತಾರೆ. ಇದು ತಲವಕಾರೋಪನಿಷತ್ತಿನ ಕನ್ನಡಾನುವಾದ. ಈ ಕರ್ಮದಿಂದ ಗುರುಗಳು ಪ್ರೀತರಾಗಲಿ ಎಂದು ಪ್ರಾರ್ಥಿಸುತ್ತೇನೆ.

ಯಶ್ಚಿದಾನಂದಸಚ್ಛಕ್ತಿಸಂಪೂರ್ಣೋ ಭಗವಾನ್ ಪರಃ ।
ನಮೋಸ್ತು ವಿಷ್ಣವೇ ತಸ್ಮೈ ಪ್ರೇಯಸೇ ಮೇ ಪರಾತ್ಮನೇ ॥

॥ ಅಸ್ಮದ್ಗುರ್ವಂತರ್ಗತ ತಾತ್ತ್ವಿಕದೇವತಾಂತರ್ಗತ
ಭಾರತೀರಮಣ ಮುಖ್ಯಪ್ರಾಣಾಂತರ್ಗತ
ಶ್ರೀಹರಿಃ ಪ್ರೀಯತಾಮ್ ॥

ಇತಿ ಸಜ್ಜನ ವಿಧೇಯ
ಬಿ.ಆರ್.ವೆಂಕಟೇಶ



# ಆಶೀರ್ವಚನ

ಶ್ರೀಯುತ ವೆಂಕಟರಾವ್ ಶೆಡಂಬಿ ಕುಟುಂಬ ಹಾಗೂ ಶ್ರೀಯುತ ಗಿರೀಶ ನಾಯಕ್ ದಂಪತಿಗಳು ಈ ಗ್ರಂಥಪ್ರಕಾಶನದ ಸಂಪೂರ್ಣ ವೆಚ್ಚವನ್ನು ಭರಿಸಿ ಶ್ರೀವೇದವ್ಯಾಸದೇವರ ಹಾಗೂ ಶ್ರೀಮದಾಚಾರ್ಯರ ಉತ್ತಮ ಸೇವೆಯನ್ನು ಮಾಡಿದ್ದಾರೆ. ಈ ದಂಪತಿಗಳಿಗೆ ಭಗವಂತ ಆಯುರಾರೋಗ್ಯ ಐಶ್ವರ್ಯಗಳನ್ನು ಆಚಾರ್ಯರ ಶಾಸ್ತ್ರದಲ್ಲಿ ಆಸಕ್ತಿಯನ್ನು ನೀಡಲಿ ಎಂದು ಅಸ್ಮದುಪಾಸ್ಯಮೂರ್ತಿ ಶ್ರೀಮೂಲರಾಮದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ



# विषयानुक्रमणिका



॥ हरिः ॐ ॥

आप्यायन्तु ममाङ्गानि वाक् प्राणश्चक्षुः श्रोत्रमथो बलमिन्द्रियाणि च सर्वाणि । सर्वं ब्रह्मौपनिषदम् । माऽहं ब्रह्म निराकुर्यां मा मा ब्रह्म निराकरोत् । अनिराकरणमस्त्वनिराकरणं मेऽस्तु । तदात्मनि निरते य उपनिषत्सु धर्मास्ते मयि सन्तु ते मयि सन्तु ॥
ॐ शान्तिः शान्तिः शान्तिः ॥



श्रीमदानन्दतीर्थभगवत्पादाचार्यविरचितम्

# तलवकारोपनिषद्भाष्यम्

मङ्गलाचरणम् -

अनन्तगुणपूर्णत्वादगम्याय सुरैरपि ।
सर्वेष्टदात्रे देवानां नमो नारायणाय ते ॥

## श्रीव्यासतीर्थविरचितं विवरणम्

जडाजडात्मकं विश्वं कृत्वाधिष्ठाय संहरन् ।
स्वभावात्क्रीडते यस्तं वन्दे श्रीमध्ववल्लभम् ॥

योऽसुरानजयद्देवहृदयस्थस्तदर्थतः ।
ददौ चाभीष्टमिष्टेभ्यस्तं वन्दे मध्ववल्लभम् ॥

तलवकारोपनिषदं यथावद्व्याचिख्यासुः भगवान् आनन्दतीर्थमुनिः तदुक्तगुणै-रुपश्लोकयन्नारायणं प्रणमति- **अनन्तेति** ॥ 'न तत्र चक्षुर्गच्छति'इत्यादिना सुरैरप्यगम्यत्वमुक्तं तत्सर्वथा दर्शनायोग्यत्वात्किमित्यत उक्तम्- **अनन्तगुण-पूर्णत्वादिति** ॥ 'ब्रह्म ह देवेभ्यो विजिग्ये' इत्यादिनोक्तं सर्वेष्टदातृत्वम् ।

## श्रीवामनपण्डितविरचिता टीका

वन्दे विष्णुं रमानाथमगण्यगुणवारिधिम् ।
निर्दोषं सर्वकर्तारं सर्वाभीष्टप्रदं सदा ॥ १ ॥

श्रीमन्मध्वमहाचार्यं तच्छिष्यान् परमान् गुरून् ।
तच्छिष्यान् स्वगुरूंश्चापि वन्देऽथो सर्वसज्जनान् ॥ २ ॥

माध्वं तलवकारोपनिषद्भाष्यं महार्थवत् ।
व्याख्यास्यामो यथाबोधं विष्णुदेवप्रसत्तये ॥ ३ ॥

'अनन्तगुणपूर्णत्वात्' इत्यादिश्लोकेन श्रीमध्वाचार्यो भगवान् तद्भाष्यमारभमाणः स्वेष्टदेवतायै नारायणाय [1]नमस्करोति शिष्टाचाररक्षणार्थम् । अत्र सम्बोधनाभावात् 'ते नमः' इत्युक्तं कथमिति चेत्, ''अनभिमुखस्य प्रतियोगिनोऽभिमुखीकरणं हि सम्बोधनं'' नाम । इह तु नित्याभिमुखत्वाद् विष्णोस्तात्कालिकसम्बोधन-मन्तरेणापि तुभ्यमित्यादिव्यवहारो युज्यते । अस्य भगवतो नारायण एव गुरुरिति तन्नमस्कारोऽप्यत्रैव कृतो भवति । अत्र पुनः 'केनेषितम्' इत्याद्युपनिषदभि-प्रेतार्थसूचनात् तद्भाष्यमिदं क्रियत इति वस्तुनिर्देशोऽप्यर्थतः कृत एव स्यात् । अधिकार्यादयश्चात्र सूचिता भवन्ति । नन्तृनम्यावधिकारिविषयौ । सर्वेष्टस्वीकारः फलम् । एवं चेदिदं 'देवानाम्' इत्येवोक्तत्वात् मनुष्याणां न किञ्चित् फलमनु-ज्ञातमिति चेत्, मैवम्, देवानां सर्वेष्टद इत्युक्त्या तदवराणां मनुष्याणामल्पेष्टदः, तद्विरुद्धानामसुराणां सर्वानिष्टद इत्युपलक्षितम् । 'सुरैरप्यगम्याय' इति प्रत्यक्षादि-विवक्षयैवोक्तत्वात् तैरपि जिज्ञास्यो भगवानागमैरिति गम्यते । 'अथ नु मीमांस्यमेव ते मन्ये' इति वचनाच्च । अतो जिज्ञास्यजिज्ञासुभावः सम्बन्धः ।

## श्रीवादिराजतीर्थविरचिता प्रकाशिका

**दद्याद्धियां हयग्रीवः पद्मा दद्याच्छ्रियं मम ।**
**विद्वान् मध्वो बुद्धिशुद्धिं दद्यादद्य महर्धिमान् ॥**
**प्रणम्य कमलाकान्तमनन्तं चिन्तितार्थदम् ।**
**कुर्वे तलवकारोपनिषद्भाष्यस्य टिप्पणीम् ॥**

तलवकारोपनिषदं व्याचिख्यासुर्भगवानानन्दतीर्थमुनिस्तदुक्तगुणवत्तया भगवन्तं स्तुवन् प्रणमति- **अनन्तगुणपूर्णत्वादिति** ॥ 'तत्र व्यजानन्त किमिदं यक्षम्' इत्यस्यार्थकथनम् 'अगम्याय सुरैरपि'इति । 'तस्मिन्नैवाकाशे स्त्रियमाजगाम बहुशोभमानामुमां हैमवतीम्' इति पार्वतीमुखेनेन्द्रादीनां ज्ञानदानस्योक्तत्वात् 'देवानां सर्वेष्टदात्र' इत्युक्तम् ।

---

१) ६८१.क्रियार्थोपपदस्य च कर्मणि स्थानिनः २-३-१४ इति कर्मणि चतुर्थी तुमुन्नन्तार्थोऽत्र अध्याहर्तव्यः । नारायणं अनुकूलयितुं अनुग्रहयितुं (अनुग्रहोन्मुखं कर्तुं) इति ''नमस्कुर्यो नृसिंहाय'' इतिवत् साधु । तस्यच नारायणकर्मक अनुग्रहोन्मुखीकरणक्रियार्थाः प्रणमनक्रिया इति बोधः ।

## श्रीवेदेशतीर्थविरचितं विवरणम्

प्राणादेरीशितारं निखिलगुणनिधिं सर्वदेवाद्यगम्यं
व्यक्ताव्यक्तात्परं तं परमसुखनिधिं सर्वदोषातिदूरम् ।
सर्वज्ञं सर्वदेवेष्टदमपि निखिलं भासयन्तं स्वभासा
वन्दे विष्णुं सदाहं निखिलगुणसमूहात्परं मुक्तगम्यम् ॥१॥

निखिलाद्वैतसिद्धान्तप्राप्ताज्ञानविनाशकः ।
श्रीमदाचार्यसूर्योऽयं दद्यात्तत्त्वप्रकाशनम् ॥ २ ॥

श्रीमदाचार्यसान्निध्यबलाद्यस्तस्य भाववित् ।
प्रकटीकृत्य तं सम्यग्जयतीर्थोऽभिभासते ॥ ३ ॥

येन वेदान्तभाष्याणि विवृतानि महात्मना ।
तं वन्दे व्यासतीर्थाख्यं वेदान्तार्थप्रसिद्धये ॥ ४ ॥

रधूत्तमगुरुर्भूयान्मम ज्ञानाय सर्वदा ।
श्रीमध्वशास्त्रं संशोध्य यः सम्यक् ज्ञानमाप्तवान् ॥ ५ ॥

नत्वा रमापतिं सर्वदेवानामिष्टदं हरिम् ।
भाष्यं तलवकारस्य व्याख्यास्येऽहं यथामति ॥ ६ ॥

इह हि विविधसांसारिकदुःखदर्शनेन विरक्तस्य शमदमादिमतोऽधिकारिणो मोक्षार्थं भगवत्स्वरूपप्रतिपादनाय प्रवृत्तां तलवकारोपनिषदमन्यैरन्यथाव्याख्यातत्वेनाप्रवृत्तामिव मन्यमानो भगवान् आनन्दतीर्थमुनिः तां यथावद्व्याचिख्यासुः प्रारिप्सितनिर्विघ्नपरिसमाप्त्यादिप्रयोजने उपनिषत्प्रतिपाद्यगुणवन्नारायणस्तुतिनती शिष्यशिक्षार्थं ग्रन्थादौ निबध्नाति- **अनन्तेति** ॥ अगम्याय साकल्येन ज्ञातुमशक्याय । पृथग्जनैरज्ञेयत्वं देवादिसाधारणमित्यत उक्तं- **सुरैरपीति** ॥ अपिशब्दः कैमुत्यद्योतनार्थः । सर्वज्ञकल्पैरपीति वा । रमाब्रह्मादावविद्यमानं साकल्येन ज्ञातुमशक्यत्वमस्यैव कुत इत्यत उक्तम्- **अनन्तेति** ॥ वक्ष्यति चैतत् 'न तत्र चक्षुर्गच्छति' इत्यादिना । अनेन नम्यत्वोपपादकं विशिष्टत्वमुक्तं भवति । तदुपपादकमिष्टत्वं चाह- **सर्वेति** ॥ इदमपि 'ब्रह्म ह देवेभ्यः' इत्यादिना वक्ष्यति ।

सर्वदाऽपरोक्षीकृतनारायणोऽपि भगवान् ग्रन्थकरणसमये विशेषतोऽपि तमपरोक्षीकृतवानिति त इत्यपरोक्षनिर्देशः । अनेन नारायणो विषयः, सर्वेष्टमेव प्रयोजनम्, तदर्थं तज्जिज्ञासुरधिकारीति सूचितम् । तेन युक्तमेतदुपनिषदो व्याख्यानम् ।

## श्रीसत्यप्रियतीर्थविरचिता भाष्यविवृतिः

**अजीजयत् पूर्वदेवान् देवान् योऽर्थमवापिपत् ।**
**अबीभसद्भास्वदादीन् श्रीजानिर्नोऽस्तु सम्पदे ॥**

तलवकारोपनिषदं व्याकरिष्यन् भगवानाचार्यश्चिकीर्षिताविघ्नपरिसमाप्त्यादि प्रयोजने तत्प्रतिपाद्यदेवतास्तुतिनती प्रथमं न्यबध्नात्- **अनन्तेति** ॥ न तत्र चक्षुर्गच्छतीत्यादिना सुरागम्यत्वं उपनिषत् प्रत्यपीपदत् । तत् समगृण्हात् - **अगम्याय सुरैरपीति** ॥ 'ते ह्येनं नेदिष्ठं पस्पृशुः तर्ह्येनत्प्रथमो विदाञ्चकार ब्रह्मेति' देवगम्यत्वप्रतिपादनाद्देवागम्यत्वोक्तिरत्र अनन्तगुणपरिपूर्णत्वात् ब्रह्मणः साकल्येनागम्यत्वपरा । तदाह- **अनन्तगुणपूर्णत्वादगम्याय सुरैरपीति** ॥

'ब्रह्म ह देवेभ्यो विजिग्ये' इति वाक्यं भगवतो देवेष्टदातृत्वमवोचत । तदुपपादनायाह- **सर्वेष्टदात्रे देवानामिति॥** अत्र देवानामिति षष्ठी सम्प्रदानस्यापि शेषत्वविवक्षया । रजकस्य वस्त्रं ददातीतिवत् ।

यद्वा, देवान् आम् नम इति च्छेदः । तत्र देवान् प्रति सर्वेष्टदात्र इति योजना । गुणोत्कर्षं वदतः प्रति सर्वमभिप्रेतं ददातीतिवत् । आमेवमर्थे 'आमेवं स्वयमात्मना' इत्यमरः । तथा चैवं योजना । आम् एवं अनन्तगुणपूर्णत्वात् देवेष्टदातृत्वाच्च नारायणाय । न पुनरश्वकर्णादिवत्सङ्केतमात्रेणेति । अनन्तगुणपूर्णत्वं नारायणशब्दार्थ इति स्पष्टं टीकायाम् । देवेष्टदातृत्वं तु 'नरौ तावविनाशित्वादुपचारः क्वचिद्भवेत्'इति ऋग्भाष्ये नरशब्दस्य उपचरितामृतत्वार्थप्रदत्वप्रतिपादनात् नरशब्दः उपचरितामृतदेवपरः ततस्तस्येदमित्यणि नारं देवसम्बन्धि देवेष्टमिति लभ्यते । ततः नारं देवेष्टं आपयति प्रापयतीति नारायणः । न जायते अर्दयति च संसारमिति जनार्दन इतिवत् । अयतेर्ण्यन्तात् कर्तरि ल्युः नन्दादित्वात् अनकरणात् । 'कृत्यल्युटो बहुलम्' इति वचनात् ल्युड्वा । ल्युटः

कर्त्रर्थत्वं च 'रुजार्थानां भाववचनानां मज्वरेः' (सि.कौ.६१५) इति सूत्रे वचनशब्दे प्रत्ययार्थकर्ता विवक्षितः, कर्तरि ल्युटो विधानात् । प्रकृत्यर्थवचन-क्रिया न विवक्षिता। तेन भावो वचनः कर्ता येषां ते भाववचनाः । भावकर्तृका इत्यर्थः सम्पद्यते इति कैय्यटोक्तेरवबुध्यामहे । 'भाववचनाश्च' (सि.कौ.३१८०) इति सूत्रे वक्तीति वचनं कृत्यल्युटो बहुलमिति कर्तर्यपि ल्युट् इति हरदत्तोक्तेश्च ।

अत्र च नारायण एव विषयः । तज्ज्ञप्तिसाधनज्ञानविषयत्वेन तच्छेषतया तारतम्यं च विषयः । तज्ज्ञानमवान्तरप्रयोजनम् । सर्वेष्टं मुख्यं प्रयोजनम् । तत्त्वं विविदिषुरेवाधिकारीति सूचितम् । सम्बन्धस्तु स्पष्टः ।

## श्रीवरदतीर्थभिक्षुविरचिता टीका

**नत्वा तलवकाराणां हरिं पूर्णज्ञजन्मनः ।**
**रहस्यभाष्यस्यार्थोऽयं समासेन विलिख्यते ॥**

अथान्यैरन्यथा व्याख्यातां तलवकारोपनिषदं यथावद् व्याचिख्यासुः भगवानाचार्यः प्रारिप्सितस्य ग्रन्थस्य निर्विघ्नपरिसमाप्त्याद्यर्थं एतदुपनिषदुक्त-विशेषणविशिष्टं नारायणं नमति **अनन्तेति** ॥ श्रूयतेह्यत्रैव । 'न तत्र चक्षुर्गच्छति'इत्यादिना हरेः सुरैरगम्यत्वं, 'ब्रह्म ह देवेभ्यो विजिग्ये' इत्यादिना देवेभ्य इष्टदातृत्वं च । हरेः सुरैरगम्यत्वं सर्वथाऽविज्ञेयत्वं प्राप्तम् । अत आह- **अनन्तेति** ॥

### उपनिषत्

**केनेषितं पतति प्रेषितं मनः केन प्राणः प्रथमः प्रैति युक्तः ।**
**केनेषितां वाचमिमां वदन्ति चक्षुः श्रोत्रं क उ देवो युनक्ति ॥१॥**

### भाष्यम्

**वैजयन्ते समासीनमेकान्ते चतुराननम् ।**
**विष्णोर्विविदिषुस्तत्त्वं पर्यपृच्छत्सदाशिवः ॥**

